

ಕಾಯಕವೇ ಕೈಲಾಸ

# ಸಿದ್ಧಗಂಗಾ



**ಮಹಾಶಿವರಾತ್ರಿ ಹಬ್ಬದ ಶುಭಾಶಯಗಳು**

ಸಂಪುಟ : ೫೪ ಫೆಬ್ರವರಿ ೨೦೧೮ ಸಂಚಿಕೆ : ೦೨





ಜನವರಿ ೧೫ ರಂದು ಶ್ರೀಮಠದಲ್ಲಿ ನಡೆದ ಲಿಂ. ಶ್ರೀ ಅಟವೀ ಸ್ವಾಮಿಗಳು ಹಾಗೂ ಲಿಂ. ಶ್ರೀ ಉದ್ದಾನ ಶಿವಯೋಗಿಗಳವರ ಪುಣ್ಯಸ್ಮರಣೆ ಸಮಾರಂಭವನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಬೇಲಿಮಠದ ಶ್ರೀ ಶಿವಾನುಭವ ಚರಮೂರ್ತಿ ಶಿವರುದ್ರ ಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ವಚನಾನಂದ ಸ್ವಾಮಿಗಳು, ತುಮಕೂರು ತಾಲ್ಲೂಕು ಕ.ಸಾ.ಪ. ಅಧ್ಯಕ್ಷೆ ಶ್ರೀಮತಿ ಬಿ.ಸಿ. ಶೈಲಾನಾಗರಾಜ್, ಶ್ರೀ ಕೆ.ಹೆಚ್. ಶಿವರುದ್ರಯ್ಯ, ಶ್ರೀ ಕೆ.ಬಿ. ಜಯಣ್ಣ ಮೊದಲಾದವರು ಉಪಸ್ಥಿತರಿದ್ದರು.




ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತುಮಕೂರಿನ ವಿದ್ಯಾವಾಹಿನಿ ಸಂಸ್ಥೆಯ ಸಂಸ್ಥಾಪಕರಾದ ಶ್ರೀ ಕೆ.ಬಿ. ಜಯಣ್ಣನವರಿಗೆ 'ಕಲ್ಯಾಣಶ್ರೀ' ಪ್ರಶಸ್ತಿಯನ್ನು ನೀಡಿ ಗೌರವಿಸಿದರು.



ವಿದೇಶಿ ಪ್ರವಾಸಿಗರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರ ದರ್ಶನ ಭಾಗ್ಯ ಪಡೆದರು. ಈ ಸಂದರ್ಭದಲ್ಲಿ ಸಿದ್ಧಗಂಗಾ ಮಾಸಪತ್ರಿಕೆಯ ನಿರ್ವಹಣಾ ಸಮಿತಿ ಸದಸ್ಯರಾದ ಶ್ರೀ ಎಂ. ರೇಣುಕಾರಾಧ್ಯ ಮೊದಲಾದವರು ಉಪಸ್ಥಿತರಿದ್ದರು.



## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆದಗಂ ಶರಣರನು ಸೇವಿಪೆನು ಬಸವೇಶ



# ಸಿದ್ಧಗಂಗಾ

ಸಂಪುಟ : ೫೪ ಫೆಬ್ರವರಿ ೨೦೧೮ ಸಂಚಿಕೆ : ೦೨




ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.

ಮುದ್ರಕರು :
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್
ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ,
ತುಮಕೂರು-೫೭೨ ೧೦೪.



ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೩೨೨.


## ಒಳಪುಟಗಳಲ್ಲಿ ..................




ಚಂದಾ ವಿವರ : ವಾರ್ಷಿಕ ಚಂದಾ ರೂ. 200/–
ಆಜೀವ ಸದಸ್ಯತ್ವ ರೂ. 1500/– ಬಿಡಿ ಪ್ರತಿ ರೂ. 20.00







## ಸಂಪಾದಕೀಯ........

# ಶ್ರೀಮಠದಲ್ಲಿ ಆಯೋಜಿಸಿದ್ದ ಭವ್ಯ ಸಮಾರಂಭ

'ಉದ್ದಾನ ಶಿವಯೋಗಿಗಳು ಸುಮಾರು ವರ್ಷಗಳ ಹಿಂದೆಯೇ ವಿದ್ಯಾರ್ಥಿನಿಲಯ, ಶಿಕ್ಷಣದ ಬಗ್ಗೆ ಕನಸು ಕಂಡಿದ್ದರು. ಪೂಜ್ಯ ಹಿರಿಯ ಶ್ರೀಗಳ ಪ್ರಯತ್ನದಿಂದ ಸಿದ್ಧಗಂಗಾ ಶಿಕ್ಷಣ ಸಂಸ್ಥೆ ಇಷ್ಟು ದೊಡ್ಡ ಪ್ರಮಾಣದಲ್ಲಿ ಬೆಳೆದಿದ್ದು ಅವರ ಕನಸು ನನಸಾಗಿದೆ' ಎಂದು ಸಿದ್ಧಗಂಗಾ ಮಠಾಧ್ಯಕ್ಷರಾದ ಶ್ರೀ ಸಿದ್ಧಲಿಂಗಮಹಾಸ್ವಾಮೀಜಿ ಹೇಳಿದರು. ಶ್ರೀಮಠದಲ್ಲಿ ೧೫-೧-೨೦೧೮ರಂದು ನಡೆದ ಅಟವೀಶ್ರೀ ಮತ್ತು ಉದ್ದಾನಶ್ರೀಗಳವರ ಪುಣ್ಯಸ್ಮರಣೆ ಮತ್ತು ಗ್ರಾಮಾಂತರ ಬಸವ ಜಯಂತಿ ವಾರ್ಷಿಕ ಸಮಾರೋಪ ಸಮಾರಂಭದಲ್ಲಿ ಶ್ರೀಗಳು ನುಡಿದರು.

ಉಪನ್ಯಾಸ ನೀಡಿದ ಶ್ರೀಮತಿ ಬಿ.ಸಿ. ಶೈಲಾ ನಾಗರಾಜ್ ಅವರು 'ಸೂರ್ಯ ಮತ್ತು ಗುರುವಿಗೆ ಹೋಲಿಕೆ ಮಾಡಿದರೆ, ಸೂರ್ಯನಿಗಿಂತಲೂ ಗುರುವೇ ಶ್ರೇಷ್ಠ. ಏಕೆಂದರೆ ಸೂರ್ಯನು ಮನಸಿನ ಹೊರಗಿನ ಕತ್ತಲೆಯನ್ನು ಕಳೆದರೆ, ಗುರು ಹೃದಯದ ಒಳಗಿನ ಕತ್ತಲನ್ನು ಕಳೆದು ಬೆಳಕು ನೀಡುತ್ತಾನೆ' ಎಂದರು. ಸಿದ್ಧಗಂಗಾ ಶ್ರೀಗಳು ಕೇವಲ ಭಾರತರತ್ನ ಅಲ್ಲ ಅವರು ತಮ್ಮ ತ್ರಿವಿಧ ದಾಸೋಹದ ಮೂಲಕ ವಿಶ್ವರತ್ನರಾಗಿದ್ದಾರೆ ಎಂದು ಅಭಿಪ್ರಾಯಪಟ್ಟರು.

ಬೆಂಗಳೂರಿನ ವಚನಾನಂದಸ್ವಾಮಿಗಳು 'ಗಂಗಾನದಿಯಲ್ಲಿ ಸ್ನಾನ ಮಾಡಿದಾಗ ತಮ್ಮ ಪಾಪಗಳೆಲ್ಲವೂ ಕಳೆಯುತ್ತದೆ ಎನ್ನುವ ಅಭಿಪ್ರಾಯದ ಭ್ರಮೆಯಿದೆ, ಅದು ಸುಳ್ಳು, ಗುರುಕೃಪೆಯಿದ್ದಾಗ ಮಾತ್ರ ಪಾಪಗಳನ್ನು ಕಳೆದುಕೊಳ್ಳಲು ಸಾಧ್ಯ' ಎಂದರು.

ಬೆಂಗಳೂರು ಬೇಲಿಮಠದ ಶ್ರೀ ಶಿವಾನುಭವ ಚರಮೂರ್ತಿ ಶಿವರುದ್ರಸ್ವಾಮಿಗಳು 'ವೆಂಕಟೇಶ್ವರರನ್ನು ನೋಡುವ ಉದ್ದೇಶದಿಂದ ತಿರುಪತಿಗೆ ಹೋಗುವ ಹಲವಾರು ಜನರು ವೆಂಕಟೇಶ್ವರನ ದರ್ಶನ ಪಡೆಯದೆ, ಅವನಿಗೆ ತೊಡಿಸಿರುವ ವಜ್ರದ ವೈಢೂರ್ಯಗಳನ್ನು ನೋಡಿ ಕಣ್ತುಂಬಿಸಿಕೊಳ್ಳುತ್ತಾರೆ. ಹೀಗಾಗಿ ನೋಡುವ ಕಣ್ಣಿನಲ್ಲಿ ಅದು ಕತ್ತಲಲ್ಲಿರುತ್ತದೆ. ಬೆಳಕಿನೆಡೆಗೆ ನಡೆಯುವುದನ್ನು ಮರೆಯುತ್ತಾರೆ' ಎಂದರು.

ಸಮಾರಂಭದಲ್ಲಿ ಅಟವೀಶ್ರೀ ಪ್ರಶಸ್ತಿಯನ್ನು ಶ್ರೀ ಎಸ್.ಎಸ್. ಶಿವರುದ್ರಯ್ಯ ಉಗ್ರಾಣದ ಮೇಲ್ವಿಚಾರಕರು ಅವರಿಗೆ ಮರಣೋತ್ತರವಾಗಿ ನೀಡಲಾಯಿತು. ಅಂತೆಯೇ ಶ್ರೀ ಬಿ. ಹೊನ್ನಪ್ಪ ಮಾಸ್ತರರಿಗೆ ಮರಣೋತ್ತರವಾಗಿ ಉದ್ದಾನಶ್ರೀ ಪ್ರಶಸ್ತಿಯನ್ನು ನೀಡಲಾಯಿತು. ತಲಾ ಹತ್ತುಸಾವಿರ ರೂ ಗೌರವಧನ ಕೊಡಲಾಯಿತು. ತುಮಕೂರಿನ ವಿದ್ಯಾವಾಹಿನಿ ಶಿಕ್ಷಣ ಸಂಸ್ಥೆಯ ಸಂಸ್ಥಾಪಕರಾದ ಶ್ರೀ ಕೆ.ಬಿ. ಜಯಣ್ಣನವರಿಗೆ 'ಕಲ್ಯಾಣಶ್ರೀ' ಪ್ರಶಸ್ತಿಯನ್ನು ಹತ್ತು ಸಾವಿರ ಗೌರವಧನದೊಡನೆ ನೀಡಲಾಯಿತು.

ಮಧ್ಯಾಹ್ನ ೩ ಗಂಟೆಗೆ ಆಯೋಜಿಸಿದ್ದ ಎರಡನೇ ಅಧಿವೇಶನ ಗ್ರಾಮಾಂತರ ಬಸವ ಜಯಂತಿ ಸಮಾರೋಪ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಕನಕಪುರ ದೇಗುಲಮಠದ ಅಧ್ಯಕ್ಷರಾದ ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು ಶ್ರೀಮಠ ಸಿದ್ಧಗಂಗಾಕ್ಕೂ ತಮಗೂ ಬೆಳೆದು ಬಂದ ಆತ್ಮೀಯ ಬಾಂಧವ್ಯವನ್ನು ಸಭಿಕರ ಗಮನಕ್ಕೆ ತಂದರು. ಪೂಜ್ಯಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಆಶೀರ್ವಚನ ನೀಡಿದರು. ಸಮಾರಂಭದಲ್ಲಿ ರಾಯರಪಾಳ್ಯದ ಶ್ರೀ ಬಸವರಾಜಯ್ಯ, ಅಂತರಸನಹಳ್ಳಿ ಶ್ರೀ ವೀರಭದ್ರಯ್ಯನವರನ್ನು ಸನ್ಮಾನಿಸಲಾಯಿತು.

ರಾತ್ರಿ ೮.೩೦ಕ್ಕೆ ಶ್ರೀಮಠದ ಶಿಕ್ಷಕರು ಮತ್ತು ವಿದ್ಯಾರ್ಥಿಗಳಿಂದ 'ಬಸವಬೆಳಗು' ನಾಟಕವನ್ನು ಪ್ರದರ್ಶಿಸಲಾಯಿತು.

ಈ ಪುಣ್ಯದಿನದಂದು ಗುರು ಅಟವೀಸ್ವಾಮಿಗಳ, ಗುರು ಉದ್ದಾನಸ್ವಾಮಿಗಳ ಮತ್ತು ಬಸವಣ್ಣನವರ ಭಾವಚಿತ್ರಗಳ ಅಡ್ಡಪಲ್ಲಕ್ಕಿ ಉತ್ಸವ, ನಂದಿಧ್ವಜ, ವೀರಗಾಸೆ, ಕರಡಿ, ಚಮ್ಮಾಳ, ವೀರಭದ್ರನ ಕುಣಿತ ಪ್ರದರ್ಶನಗಳೊಂದಿಗೆ ಮೆರವಣಿಗೆ ನಡೆಯಿತು. ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಮಂತ್ರ ಮಂಚದ ಮೇಲೆ ಕುಳಿತೇ ಎಲ್ಲವನ್ನೂ ವೀಕ್ಷಿಸಿ ಸಂತೋಷಪಟ್ಟರು.

ಉಪನ್ಯಾಸ ನೀಡಿದ ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜಿನ ಡಾ. ಡಿ.ಎನ್. ಯೋಗೀಶ್ವರವರು ಸುವಿಸ್ತಾರವಾಗಿ ಶ್ರೀಮಠ ಬೆಳೆದು ಬಂದುದನ್ನು ಅಧಿಕೃತ ಮಾಹಿತಿಗಳೊಂದಿಗೆ ಸಂಶೋಧನಾತ್ಮಕ ಭಾಷಣ ನೀಡಿದ್ದು ಭಕ್ತಾದಿಗಳಿಗೆ ಸಂತೋಷ ನೀಡಿತು.

ಸಮಾರಂಭದ ಸ್ವಾಗತ ಭಾಷಣವನ್ನು ಶ್ರೀಮಠದ ಹಳೆಯ ಹಾಗೂ ಹಿತೈಷಿಗಳ ಸಂಘದ ಕಾರ್ಯದರ್ಶಿ ಶ್ರೀ ಕೆ.ಹೆಚ್. ಶಿವರುದ್ರಯ್ಯನವರು, ಮಧ್ಯಾಹ್ನದ ಅಧಿವೇಶನದಲ್ಲಿ ಮಾಧ್ಯಮಿಕ ಶಾಲೆಯ ಮುಖ್ಯ ಶಿಕ್ಷಕ ಶ್ರೀ ಗಂಗಾಧರಯ್ಯನವರು, ವಂದನಾರ್ಪಣೆಯನ್ನು ಶ್ರೀ ನೀಲಕಂಠಯ್ಯನವರು, ಶ್ರೀ ಹೆಚ್.ವಿ. ವೀರಭದ್ರಯ್ಯನವರು ಸಮಸ್ತರನ್ನೂ ವಂದಿಸಿದರು.

**ಪ್ರೊ. ಹೆಚ್.ವಿ. ವೀರಭದ್ರಯ್ಯ**
ಸಂಪಾದಕರು





## ಶ್ರೀವಾಣಿ



# ಪ್ರಾಚೀನ ಪವಿತ್ರ ಸರಸ್ವತಿ ಸಂಸ್ಕೃತ ಭಾಷೆ

ವೇದವು ಶತಮಾನಗಳಿಂದ ಅವ್ಯಾಹತವಾಗಿ ಬೆಳಗುತ್ತಲಿರುವ ಜ್ಞಾನಪೀಠ. ಪರಮಾತ್ಮ ಪದಕಮಲಗಳಿಂದ ಧಾರಾಕಾರವಾಗಿ ಭುವಿಗಿಳಿದು ಬಂದ ಜ್ಞಾನಸಿಂಧು. ವಿಷಯ ವ್ಯಾಮೋಹಕನಿಗೆ ಸ್ವಚ್ಛಂಧ ಆತ್ಮಾಕಾಶದಲ್ಲಿ ವಿಹರಿಸಿದ ಋಷಿಗಳ ಅನುಭವ ವಚನ ಪ್ರಸಾದ. ಅದರಲ್ಲಿ ಮಿಂದವರು ಪಾವನರು. ಅದರ ರಸಪಾನ ಮಾಡಿದವರು ಕೃತಕೃತ್ಯರು.

ವೇದಪ್ರಾಮಾಣವು ಸರ್ವಶ್ರೇಷ್ಠ. ಹಿಮಾಲಯ ಪರ್ವತ ಶ್ರೇಣಿಯು ಭೂಮಂಡಲವನ್ನಳೆಯುವ ಮಾನದಂಡ. ಹಾಗಾಗಿ ವೇದವು ಸರ್ವಶಾಸ್ತ್ರಗಳ ಪ್ರಮಾಣ ಸಿದ್ಧಾಂತವೆನಿಸುತ್ತದೆ. ಸಾಮಾನ್ಯವಾಗಿ ಭಾರತದ ವಿಶಾಲ ಭೂಮಂಡಲದಲ್ಲಿ ರಚನೆಗೆ ಬಂದ ಎಲ್ಲಾ ಶಾಸ್ತ್ರಗಳೂ ವೇದವಿದ್ಯೆಯೆಂಬ ಪ್ರಾಣವಾಯುವನ್ನು ಉಸಿರಾಗಿಸುತ್ತದೆ. ಆತ್ಮಜ್ಞಾನ ಕೋಶಗಳಾಗಿವೆ.

ಸಂಸ್ಕೃತ ಭಾಷೆಯು ಸಂಪದ್ಭರಿತವಾದ ಜ್ಯೋತಿ. ಜಗತ್ತಿಗೆ ಬೆಳಕು ತೋರಿದ ಗೀರ್ವಾಣರೂಪಿ. ವೇದಾಗಮ ಉಪನಿಷತ್ತುಗಳೆಲ್ಲ ಪ್ರಕಾಶಕ್ಕೆ ಬಂದುದು ಸಂಸ್ಕೃತದಿಂದ. ಜ್ಞಾನದ ಧವಳಗಂಗೆ, ದೇಶವಿದೇಶಗಳಲ್ಲಿ ಅನುರಣಿತವಾದ ಪ್ರಾಚೀನ ಪವಿತ್ರ ಸರಸ್ವತಿ ಸಂಸ್ಕೃತ ಭಾಷೆ.

ಸನಾತನ ಸಂಸ್ಕೃತಿಯ ಜ್ಞಾನವಾಹಿನಿಯಾದ ವೇದ ಸಂಸ್ಕೃತ ಮತ್ತು ಜ್ಯೋತಿಷವನ್ನು ಯುವಪೀಳಿಗೆಗೆ ದಾಸೋಹಗೈಯಲು ನಡೆಸಿರುವ ಪ್ರಯತ್ನ ಶ್ರೀಮಠದ ಸೇವೆಯ ಒಂದು ಪವಿತ್ರ ಮುಖ.

## ಬಸವಣ್ಣ

ಸುಮಾರು ಎಂಟು ನೂರು ವರ್ಷಗಳ ಹಿಂದೆ ಕರ್ನಾಟಕದಲ್ಲಿ ಜನ್ಮತಾಳಿದ ಬಸವಣ್ಣನವರು ಚಿಕ್ಕವಯಸ್ಸಿನಿಂದಲೂ ಉದಾತ್ತ ಮನೋಭಾವವುಳ್ಳವರಾಗಿ ದಿನಚರಿಯ ಸಾಮಾಜಿಕ ಜೀವನದಲ್ಲಿ ನಡೆಯುತ್ತಿರುವ ಅನ್ಯಾಯಗಳ ವಿರುದ್ಧ ಪ್ರಬಲ ಹೋರಾಟ ನಡೆಸಿದ ಧೀಮಂತ ವ್ಯಕ್ತಿ. ಧರ್ಮದ ಹೆಸರಿನಲ್ಲಿ ಪ್ರಚಲಿತವಾಗಿದ್ದ ಶೋಷಣೆ, ಮೇಲು ಕೀಳುಗಳೆಂಬ ಕಲ್ಪನೆ, ಧೀನದಲಿತರ ದಮನ ಮುಂತಾದ ಅನ್ಯಾಯಗಳನ್ನು ಹೋಗಲಾಡಿಸಲು ತಮ್ಮ ಜೀವನವನ್ನೇ ಮುಡಿಪಾಗಿಟ್ಟರು. ಶ್ರೇಷ್ಠವಾದ ಮಾನವೀಯ ಮೌಲ್ಯಗಳನ್ನು ಎತ್ತಿಹಿಡಿದು ಅವುಗಳನ್ನು ಅಳವಡಿಸಿಕೊಂಡು ಎಲ್ಲ ವ್ಯಕ್ತಿಯೂ ಉದ್ಧಾರವಾಗುವುದು ಸಾಧ್ಯವೆನ್ನುವ ಆತ್ಮವಿಶ್ವಾಸವನ್ನು ಮೂಡಿಸಿ ಸಕಲರನ್ನು ಉದ್ಧಾರ ಮಾಡಿದ ಮಹಾತ್ಮ. ಒಟ್ಟಿನಲ್ಲಿ ಶ್ರೇಷ್ಠವರ್ಗದ ಮಾನವತಾವಾದಿಯಾಗಿ ಜಗತ್ತಿನ ಮನುಕುಲದ ಸಮಸ್ಯೆಗಳನ್ನು ಪರಿಹರಿಸಲು ಹೆಣಗಾಡಿದ ಮಹಾನುಭಾವರು ಅವರು.

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ



ಎಮ್ಮೆಯನೇರಿದ ಎತ್ತು ಸಮ್ಮಗಾರ ನೋಡಾ
ಎತ್ತಿನೊಡೆಯ ಬಂದು ಎಮ್ಮೆಯ ಕೊಲ್ಲಲು
ಸಮ್ಮಗಾರ ಸತ್ತು ನಿಮ್ಮ ಕಂಡೆನು ಕಾಣಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ಎಮ್ಮೆಯನೇರಿದ ಎತ್ತು, ಎಮ್ಮೆಯ – ಜಡಸ್ವರೂಪವಾದ ಮಾಯಾಶಕ್ತಿಯನು, ಏರಿದ- ಆರೋಹಣವಾದ, ಎತ್ತು – ಅನಾದ್ವ ಸ್ವರೂಪವಾದ ಆತ್ಮನು, ಸಮ್ಮಗಾರನೋಡಾ – ಸರ್ವಸೂತಕಂಗಳೊಡನೆ ಕೂಡಿ ಚರಿಸುತ್ತಿಹನು ಕಂಡಾ, ಎತ್ತಿನ ಅನಾದ್ವ ಸ್ವರೂಪವಾದ ಆತ್ಮನು, ಒಡೆಯ- ಕರ್ತೃಸ್ವರೂಪವಾದ ಶ್ರೀ ಗುರುನಾಥನು, ಬಂದು – ಎಮ್ಮೆ ಬಂದು ಎಮ್ಮೆಯ – ಜಡಸ್ವರೂಪವಾದ ಮಾಯಾಶಕ್ತಿಯನು, ಕೊಲ್ಲಲು – ಸಂಹರಿಸಲು, ಸಮ್ಮಗಾರ – ಸರ್ವಸೂತಕಂಗಳು, ಸತ್ತು – ನಷ್ಟವಾಗಿ, ನಿಮ್ಮ ಕಂಡೆನು – ಲಿಂಗದಲ್ಲಿ ಕೂಡುವಂಥ ಕೂಟವನು ಅರಿದೆನು, ಕಾಣಾ – ಕಂಡಾ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಕರ್ತೃ ನೀನೇ ತಂದೆ ಭೃತ್ಯ ನೀನೆ ತಂದೆ
ಕರ್ತೃ ಭೃತ್ಯಗಳ ಸಂಗಮವೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಮ್ರತೆಯ ಶಿಖರವೆ ಅಮೃತದ ಸಾಗರವೆ
ಶಿವಶುಭ್ರ ಸಾಗರವೆ ಶ್ರೀಗುರುವೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಾಸ್ತಿ ಶ್ರೀತನುಗುಣದಿ ನಾಸ್ತಿ ಶ್ರೀಮನಗುಣದಿ
ಆಸ್ತಿ ಶ್ರೀ ಜ್ಞಾನಭಾವದಲಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅನುವೆನ್ನಲೆ ಗುರುವೆ ಘನವೆನ್ನಲೆ ಗುರುವೆ
ಅನುಘನವನೊಳಕೊಂಡ ಮಹಘನವೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನನ್ನ ಭಕ್ತಿಯ ಶಕ್ತಿ ನನ್ನ ಮುಕ್ತಿಯ ಶಕ್ತಿ
ನನ್ನ ಉಕ್ತಿಯ ಶಕ್ತಿ ತವಪಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸೇವಾಸೂರ್ಯನಾದೆ ದೀನಾನಾಥರ ಪೊರೆದೆ
ದೇವಮಾನವನಾಗಿ ಬೆಳಗಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೂವಿನಲಿ ಮುಳ್ಳನ್ನು ಬೆಣ್ಣೆಯಲಿ ನಂಜನ್ನು
ಕಾಣುವುದೆ ಜಗದ ಹಿರಿಡೊಂಕು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೂರಹತ್ತರ ದಾಟಿ ಮುನ್ನಡೆಯುತಿಹ ಪುಣ್ಯವೆ
ಮುಂಬರಿದ ಸೇವಾ ಸಂಪಿಗೆಯೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಿದ್ಧಗಂಗೆಯ ಗುರುವೆ ಸಿದ್ಧಶಿವಯೋಗಿಯೆ
ಉದ್ದಾನಗುರುಕರುಣೆ ಜ್ಯೋತಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗೋಸಲಸಿದ್ಧೇಶ ವರಗುರು ಅಟವೀಶ
ಉದ್ದಾನಗುರುವರನ ಸ್ಮರಿಸುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**ಪ್ರೊ. ಹೆಚ್.ವಿ. ವೀರಭದ್ರಯ್ಯ**



## ಚಿಂತನ

# ನಿರ್ಭಾವನಿರೀಕ್ಷಣೆ

– ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ಆತ್ಮಜ್ಞಾನವನ್ನು ಪಡೆದ ಮಾತ್ರಕ್ಕೆ ನಮ್ಮ ಬಂಧನಗಳೆಲ್ಲ ಕಳೆದುಹೋಗುತ್ತವೆ ಎಂದಲ್ಲ. ನಮ್ಮ ಬದುಕಿನಲ್ಲಿ ಅಗಾಧಪರಿವರ್ತನೆ ಆಗುತ್ತದೆ ಎಂದೂ ಅಲ್ಲ, ಆತ್ಮ ಜ್ಞಾನವು ಸಬಲವಾಗಿದ್ದರೆ ಮಾತ್ರ ಈ ಭವಬಂಧನದಿಂದ ಬಿಡುಗಡೆಯಾಗುತ್ತದೆ. ಬದುಕಿನಲ್ಲಿ ಪರಿವರ್ತನೆ ಉಂಟಾಗುತ್ತದೆ. ಜ್ಞಾನವು ಸಬಲವಾಗಬೇಕಾದರೆ ಸತತಾಭ್ಯಾಸವಿರಬೇಕು. ಹಾಗೂ ನಾವು ಈ ಜ್ಞಾನವನ್ನು ಹೃದಯತಃ ಪ್ರೀತಿಸಬೇಕಾಗುತ್ತದೆ ಎಂದು ತಿಳಿದಿದ್ದೇವೆ. ಜ್ಞಾನದ ಮೇಲಿನ ಪ್ರೇಮವು ಎಷ್ಟು ಘನಿಷ್ಠವಾಗುತ್ತದೆಯೋ ಅಷ್ಟು ಜ್ಞಾನಕ್ಕೆ ಬಲ ಬರುತ್ತದೆ.

ಲೌಕಿಕದಲ್ಲಿಯೂ ಅಷ್ಟೆ. ಒಕ್ಕಲುತನವೇ ಇರಲಿ, ವ್ಯಾಪಾರವೇ ಇರಲಿ, ಅದರ ಪ್ರೇಮವಿದ್ದರೆ ಮಾತ್ರ ಆ ಕಾರ್ಯದಲ್ಲಿ ತನ್ಮಯತೆ ಬರುತ್ತದೆ. ಅದು ಫಲಕಾರಿಯಾಗುತ್ತದೆ. ಕಾರ್ಯ ಹಾಗೂ ಪ್ರೇಮ ಇವು ಪರಸ್ಪರ ಪೂರಕ. ನಾವು ಆಧ್ಯಾತ್ಮಿಕ ಸಾಧನೆ ಮಾಡುತ್ತಿರುತ್ತೇವೆ. ಆದರೆ ಬೇರೆ ಇನ್ನೇನನ್ನೋ ಪ್ರೀತಿಸುತ್ತಿರುತ್ತೇವೆ. ಆದ್ದರಿಂದ ನಮ್ಮ ಆಧ್ಯಾತ್ಮಜ್ಞಾನಕ್ಕೆ ಬಲಬರುವುದಿಲ್ಲ. ಸಂಪತ್ತನ್ನೋ, ಕೀರ್ತಿಯನ್ನೋ ಗಳಿಸಬೇಕೆಂದು ಅವುಗಳ ಮೇಲೆ ಪ್ರೇಮವಿಟ್ಟು ಆಧ್ಯಾತ್ಮಿಕ ಸಾಧನೆಗೆ ತೊಡಗುತ್ತೇವೆ, ವಿಫಲರಾಗುತ್ತೇವೆ.

ಈಗ ನಮ್ಮ ದೇಶದಲ್ಲಿ ಹಾಗೂ ವಿದೇಶದಲ್ಲಿ ಸಾಕಷ್ಟು ತತ್ತ್ವಜ್ಞಾನದ ಪ್ರಾಧ್ಯಾಪಕರಿದ್ದಾರೆ. ತತ್ತ್ವಜ್ಞಾನ ಕುರಿತು ಅವರು ಲೀಲಾಜಾಲವಾಗಿ ಮಾತನಾಡುತ್ತಾರೆ. ಆದರೆ ವೇದಿಕೆಯಿಂದ ಕೆಳಗಿಳಿಯುತ್ತಲೇ ವಿಷಯದ ಗಳಿಕೆಯೇ ಹೆಚ್ಚಿನ ಜನರಿಗೆ ಪ್ರಧಾನವಾಗಿ ಬಿಡುತ್ತದೆ. ತತ್ತ್ವಜ್ಞಾನವು ಗೌಣವಾಗಿ ಉಳಿದುಬಿಡುತ್ತದೆ. ಆದ್ದರಿಂದ ಆತ್ಮಜ್ಞಾನವೊಂದೇ ಅಮೌಲ್ಯವೆಂದು ನಮಗನ್ನಿಸಬೇಕು. ಆಗ ಅದರ ಮೇಲೆ ಪರಮಪ್ರೇಮ ಉಂಟಾಗುತ್ತದೆ. ಜ್ಞಾನಕ್ಕೆ ಬಲ ಬರುತ್ತದೆ. ವಿಷಯವಾಸನೆ ದೂರಾಗಿ ಭಾವಬಂಧನಗಳು ಕಳಚಿಬೀಳುತ್ತವೆ. ಬದುಕು ಸುಂದರವಾಗುತ್ತದೆ.

ಆದರೆ ಸತತ ಪರಿಶ್ರಮವಿಲ್ಲದೆ, ಪರಮ ಪ್ರೇಮವೂ ಇಲ್ಲದೆ, ಈ ಜಗತ್ತಿನಲ್ಲಿ ಅನೇಕರು ಜ್ಞಾನಿಗಳಾಗಿರುವು ದನ್ನು ನೋಡುತ್ತೀವೆಯಲ್ಲ. ಸಾಮಾನ್ಯರೂ, ಘೋರ ಪಾಪದ ಕಾರ್ಯಗಳಲ್ಲಿ ನಿರತರಾದವರೂ ಹೃದಯ ಪರಿವರ್ತನೆಯಾಗಿ ಮಹಾತ್ಮರಾಗಿರುವ ಉದಾಹರಣೆ ಗಳು ಸಾಕಷ್ಟು. ನಾಮದೇವರು ಮಹಾರಾಷ್ಟ್ರದ ದೊಡ್ಡ ಸಂತ. ಅವನು ಮೊದಲು ಅರಣ್ಯದಲ್ಲಿದ್ದು ಕೆಲವು ಜನರನ್ನು ಕಟ್ಟಿಕೊಂಡು ದಾರಿಕಾರರನ್ನು ಸುಲಿಗೆ ಮಾಡುತ್ತಿದ್ದ. ನಿಷ್ಕರುಣೆಯಾದ ಅವನು ಜನರಿಗೆ ಅಪಾರ ಹಿಂಸೆಕೊಡುತ್ತಿದ್ದ. ಒಂದು ದಿನ ೬೦-೭೦ ಜನ ಯಾತ್ರಿಕರ ಗುಂಪೊಂದು ಅವರ ಕೈಗೆ ಸಿಕ್ಕಿತು. ನಾಮದೇವ ಹಾಗೂ ಅವನ ಸಂಗಡಿಗರೆಲ್ಲ ಸೇರಿ ಅವರ ಸಿರಿಯನ್ನು ಸೂರೆ ಮಾಡಿ ಅವರನ್ನೆಲ್ಲ ಕೊಂದು ಹಾಕಿದರು.

ಮುಂದೆ, ಕೆಲದಿನಗಳ ನಂತರ ನಾಮದೇವನು ಮಾರುವೇಷದಲ್ಲಿ ಒಂದು ಊರಿಗೆ ಹೋದನು. ಆ ಊರಿನ ಹೊರವಲಯದಲ್ಲಿದ್ದ ದೇವಾಲಯದ ಎದುರು ಕುಳಿತನು. ಅದೇ ಸಮಯಕ್ಕೆ ಒಬ್ಬ ತಾಯಿ ಚಿಕ್ಕಮಗುವನ್ನು ಎತ್ತಿಕೊಂಡು ಆ ದೇವಾಲಯಕ್ಕೆ ಬಂದಳು. ಒಳಗೆ ಹೋಗಿ ದೇವರ ಮುಂದೆ ದೀಪ ಹಚ್ಚಿ ಕಣ್ಣೀರುಗರೆದು ಹೊರಬಂದಳು. ಅವಳ ದುಃಖವನ್ನು ಕಂಡು ತಾಳಲಾರದೆ ನಾಮದೇವ ಕೇಳಿದ, "ಏಕೆ ತಾಯಿ, ದೇವರ ಮುಂದೆ ಅಷ್ಟೊಂದು ದುಃಖಿಸಿದೆಯಲ್ಲ ?"

ಆ ತಾಯಿ ಹೇಳಿದಳು, "ಏನು ಹೇಳಲಿ ಅಣ್ಣಾ ನನ್ನ ಕಥೆಯನ್ನು. ಈ ಪಕ್ಕದ ಅರಣ್ಯದಲ್ಲಿ ನಾಮದೇವನೆಂಬ ಒಬ್ಬ ಭೀಕರವ್ಯಕ್ತಿ ಇದ್ದಾನೆ. ಅವನು ಮೊನ್ನೆ ೬೦-೭೦ ಜನ ಯಾತ್ರಿಕರ ಗುಂಪಿನ ಮೇಲೆ ದಾಳಿ ಮಾಡಿ ಅವರನ್ನೆಲ್ಲ ಕೊಂದು ಹಾಕಿದನು. ಆ ಯಾತ್ರಿಕರಲ್ಲಿ ನನ್ನ ಪತಿಯೂ ಇದ್ದ. ಅವನಿನ್ನು ಚಿಕ್ಕವ. ಇದೊಂದೇ ಮಗು !' ಎಂದು ಹೇಳಿ ಅವಳು ಕರುಳು ಕಿತ್ತುಬರುವಂತೆ ದುಃಖಿಸಿದಳು. ಈ

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ವ್ಯಥೆಯನ್ನು ಕೇಳುತ್ತಿರುವವನೇ ತನ್ನ ಪತಿಯ ಪ್ರಾಣವನ್ನು ತೆಗೆದವನೆಂಬುದು ಆಕೆಗೆ ತಿಳಿಯದು.

ಈ ಘಟನೆಯು ನಾಮದೇವನ ಮೇಲೆ ಅಗಾಧ ಪರಿಣಾಮ ಮಾಡಿತು. ಅಲ್ಲಿಂದಾತ ಅರಣ್ಯಕ್ಕೆ ಹೋದ. ಏನು ಮಾಡಿದರೂ ಕಣ್ಣೆದುರಿಗಿನಿಂದ ಅಳುತ್ತಿರುವ ಆ ತಾಯಿ ಮಗುವಿನ ಚಿತ್ರ, ದೂರ ಸರಿಸಲು ಆತನಿಂದ ಆಗಲಿಲ್ಲ. ಕೊನೆಗೆ ಒಂದು ನಿರ್ಧಾರಕ್ಕೆ ಬಂದ. ತನ್ನ ಒಡನಾಡಿಗಳಿಗೆಲ್ಲ ಕರೆದು ಹೇಳಿದ, 'ಇಂದಿನಿಂದ ನಾನು ಈ ಹಿಂಸಾಕಾರ್ಯ ಮಾಡಲಾರೆ !' ಅವರೆಲ್ಲ ಆಶ್ಚರ್ಯದಿಂದ ಕೇಳಿದರು, 'ಮುಂದೇನು ಮಾಡುವಿರಿ ?' 'ಇದುವರೆಗೆ ಮಾಡಿದ ಪಾಪಕಾರ್ಯಗಳನ್ನು ತೊಳೆದು ಕೊಳ್ಳುವೆ' ಎಂದು ಹೇಳಿ ನಾಮದೇವನು ಅರಣ್ಯವನ್ನು ತೊರೆದು ದೇವಾಲಯದಲ್ಲಿ ಬಂದು ಕುಳಿತ. ನಿತ್ಯವೂ ದೇವರನಾಮ ಹಾಡಿದ. ತನ್ನ ಹೃದಯದ ಕಲ್ಮಶವನ್ನೆಲ್ಲ ಕಳೆದುಕೊಂಡು, ಶ್ರೇಷ್ಠ ಸಂತನಾದ !

ನಾಮದೇವನಿಗೆ ಯಾವ ಗುರುವಿಲ್ಲ, ಉಪದೇಶವೂ ಇಲ್ಲ. ಆತ್ಮಜ್ಞಾನದ ಸತತ ಪರಿಶ್ರಮವಿಲ್ಲ ಪರಮಪ್ರೇಮವೂ ಇಲ್ಲ. ಆತನು ಪರಿಶ್ರಮಪಟ್ಟಿದ್ದು ಕೊಲೆಯಲ್ಲಿ, ಪರಮಪ್ರೇಮ ಇದ್ದದ್ದು ಹಣದಲ್ಲಿ, ಆದರೂ ಜೀವನದಲ್ಲಿ ನಡೆದ ಒಂದು ಘಟನೆಯಿಂದ ಹೃದಯ ಪರಿವರ್ತನೆ ಆಗಿ ಮಹಾತ್ಮನಾದ.

ಪತಂಜಲರು ಬಾಲಕರಾಗಿದ್ದಾಗ ಬೆಟ್ಟಗಳಿಗೆ ಹೋಗಿ ಧ್ಯಾನಸ್ಥರಾಗುತ್ತಿದ್ದರು. ಬೆಳಗ್ಗೆ, ಸಂಜೆ ಎರಡೂ ಹೊತ್ತು ನಿಸರ್ಗದ ಮಧ್ಯದಲ್ಲಿಯೇ ಇರುತ್ತಿದ್ದರು. ಸೂರ್ಯೋದಯ, ಸೂರ್ಯಾಸ್ತ, ಚಂದಿರನ ಶೀತಲಕಿರಣ, ಹಕ್ಕಿಪಕ್ಕಿಗಳ ಉಲಿವು, ಹಬ್ಬಿ ಹರವಿದ ಹಸಿರು ವನಸಿರಿ, ಎಲ್ಲವನ್ನು ಕಂಡು ಬಾಲ ಪತಂಜಲರು ಮಗ್ನರಾಗಿಬಿಡುತ್ತಿದ್ದರು. ಹಸಿವೆ ತೃಷೆಗಳನ್ನು ಮರೆಯುತ್ತಿದ್ದರು.

ಮಗುವಿನ ಮೇಲೆ ತಾಯಿಗೆ ಅಪಾರಪ್ರೀತಿ. ಪತಂಜಲರನ್ನು ಕರೆಯಲು ಸ್ವತಃ ತಾಯಿಯೇ ಒಮ್ಮೊಮ್ಮೆ ಬೆಟ್ಟಕ್ಕೆ ಬರಬೇಕಾಗುತ್ತಿತ್ತು. ಒಂದು ದಿನ ತಾಯಿ ಪತಂಜಲರಿಗೆ ಹೇಳಿದಳು, "ಮಗು ನೀನಿಲ್ಲಿಗೆ ಬಂದು ತುಂಬಾ ಸಮಯವಾಯಿತು. ಏಳು, ಮನೆಗೆ ಹೋಗೋಣ!" ಬಾಲಪತಂಜಲರು ಹೇಳಿದರು "ತಾಯಿಯೇ, ದಿಗಂತದವರೆಗೆ ಹರಡಿದ ಈ ಬೆಟ್ಟಗಳನ್ನು ನೋಡುತ್ತಿದ್ದಂತೆಯೇ ನನಗೆ ಸಮಯವೇ ತಿಳಿಯ ದಂತಾಗುತ್ತದೆ; ಏನು ಮಾಡಲಿ !"

ಮುಂದೆ, ಅವನೇ ಒಬ್ಬ ಮಹಾಯೋಗಿಯಾಗಿದ್ದ, ಪರಮತಪಸ್ವಿ ಆಗಿದ್ದ. ಅವರಿಗೆ ಬಹುತರ ತಾಯಿ ತಂದೆ ಧ್ಯಾನವನ್ನು ಹೇಳಿಕೊಡಲಿಲ್ಲ. ಯಾವ ಗುರುವೂ ಅವರಿಗೆ ಯೋಗವನ್ನು ಕಲಿಸಿಕೊಡಲಿಲ್ಲ, ಕೇವಲ ನಿಸರ್ಗದ ಮಧ್ಯದಲ್ಲಿದ್ದೇ ಸತ್ಯ ಸಾಕ್ಷಾತ್ಕಾರ ಮಾಡಿಕೊಂಡರು ! ಕ್ರೂರಿಯಾಗಿದ್ದ ನಾಮದೇವರು ಮಹಾಸಂತರಾದರು. ಹೀಗೆ ಸಹಜವಾಗಿಯೇ ಸಂತರಾಗಲು ಮಹಂತರಾಗಲು ಸಾಧ್ಯವಿರುವಾಗ, ಸತತಭ್ಯಾಸದ, ಪರಪ್ರೇಮದ ಅವಶ್ಯಕತೆ ಏನು ಎಂದು ಕೆಲವರ ಅಭಿಪ್ರಾಯ.

ಸಹಜಸಾಧನೆ ಆಗಲೆಂದು ಕಾಯಲು ನಮಗೆ ಆಯುಷ್ಯವೆಷ್ಟಿದೆ ? ಮೇಲಾಗಿ ಈ ರೀತಿ ಸಹಜಸಿದ್ಧಿ ಪಡೆದವರು ಎಷ್ಟು ಜನ ? ಎಲ್ಲೋ ಅಪವಾದಾತ್ಮಕವಾಗಿ ಒಬ್ಬಿಬ್ಬರು ಮಾತ್ರ. ಅದು ಕೆಲವೇ ಜನರ ವೈಶಿಷ್ಟ್ಯವಾಗಿದೆ. ಎಲ್ಲರಿಗೂ ಅದು ಸಾಧ್ಯವಾದುದಲ್ಲ ! ಆದ್ದರಿಂದ ಆತ್ಮದರ್ಶನಕ್ಕಾಗಿ ನಾವು ಸತತ ಪರಿಶ್ರಮಪಡಲೇಬೇಕು. ಆತ್ಮಜ್ಞಾನವನ್ನು ಹೃದಯತಃ ಪ್ರೀತಿಸಲೇಬೇಕು. ಆಧ್ಯಾತ್ಮ ಸಾಧನೆ ಎಂದರೆ ಸತತ ಪರಿಶ್ರಮ ಹಾಗೂ ಪರಮಪ್ರೇಮ. ಆದರಿಂದಲೇ ಆತ್ಮಜ್ಞಾನವು ಬಲಿಷ್ಠವಾಗುತ್ತದೆ, ಪ್ರಾಪಂಚಿಕ ಬಂಧನಗಳು ಅಳಿಯುತ್ತವೆ.

ಅದಕ್ಕಾಗಿ ಇಲ್ಲೊಂದು ರಾಜಸಾಧನೆ – ಧ್ಯಾನ ! ಇದು ಎಲ್ಲ ಸಾಧನೆಗಳ ಸಾಧನೆ. ಆದ್ದರಿಂದ ಇದು ರಾಜಸಾಧನೆ ! ಇದರಿಂದ ಆತ್ಮಜ್ಞಾನವು ಸಬಲವಾಗುತ್ತದೆ. ಪ್ರಪಂಚದ ಬಂಧನಗಳೆಲ್ಲ ಅಳಿದು ಪರಮಶಾಂತಿ ಸಮನಿಸುತ್ತದೆ. ಸಾಮಾನ್ಯವಾಗಿ ಧ್ಯಾನಶಬ್ದವನ್ನು ಎಲ್ಲರೂ ಕೇಳಿರುತ್ತಾರೆ. ಅದು ಅಷ್ಟು ಪರಿಚಿತ.

ಈ ಧ್ಯಾನದಲ್ಲಿ ಎರಡು ಪ್ರಕಾರ ೧. ಭೌತಧ್ಯಾನ. ೨. ಅಭೌತಧ್ಯಾನ. ಭೌತಿಕ ಸಿದ್ಧಿಗಾಗಿ ಮಾಡುವ ಧ್ಯಾನ ಭೌತಧ್ಯಾನ. ಕೈವಲ್ಯಸಿದ್ಧಿಗಾಗಿ, ಆತ್ಮಸಾಕ್ಷಾತ್ಕಾರಕ್ಕಾಗಿ ಮಾಡುವ ಧ್ಯಾನ ಅಭೌತಧ್ಯಾನ !

ಭೌತಿಕಧ್ಯಾನವು ಬಯಕೆಗಳನ್ನು ಪೂರೈಸಿಕೊಳ್ಳಲು ಹವಣಿಸುತ್ತದೆ. ಆದರೆ ಮಾನವನ ಪ್ರಾಪಂಚಿಕ ಬಯಕೆಗಳಿಗೆ ಕೊನೆಯೆಲ್ಲಿದೆ ? ಸಾಕಷ್ಟು ಸಂಪತ್ತು ದೊರೆಯಬೇಕು. ನಾವು ಹೇಳಿದಂತೆ ಕೇಳಬೇಕು. ನಾವು ಬಯಸಿದ್ದೆಲ್ಲ ಆಗಬೇಕು. ತ್ರಿಕಾಲಜ್ಞಾನವೂ ಆಗಬೇಕು. ವಾಕ್ಯಸಿದ್ಧಿಯಾಗಬೇಕು. ಅನ್ಯರ ಮನದೊಳಗಿನ ವಿಷಯಗಳೂ ತಿಳಿಯಬೇಕು. ಹೀಗೆಯೇ ಬಯಕೆಯ ಬಳ್ಳಿ ಬೆಳೆಯುತ್ತಲೇ ಹೋಗುತ್ತದೆ. ಆದ್ದರಿಂದ ಭೌತಿಕಧ್ಯಾನವು ಬಂಧನಕ್ಕೆ ಕಾರಣವಾಗುತ್ತದೆ.



ಅಭೌತಧ್ಯಾನವು ಹಾಗಲ್ಲ. ಅದು ಜ್ಞಾನಪ್ರಧಾನ ವಾದುದು. ಮಾನವನ ಅಂತರಂಗದಲ್ಲಿಯ ಬಯಕೆಯ ಬಳ್ಳಿಯನ್ನು ಅದು ಬೇರುಸಹಿತ ಕಿತ್ತೆಸೆಯುತ್ತದೆ. ರಾಗಾದಿ ಭಾವಬಂಧನಗಳನ್ನಳಿದು ಅವಿರಳಾನಂದವನ್ನು ತಂದುಕೊಡುತ್ತದೆ. ಆದ್ದರಿಂದ ಜೀವನ್ಮುಕ್ತಿಗೆ ಧ್ಯಾನವು ರಾಜಸಾಧನವಾಗಿದೆ. ಅಭೌತಧ್ಯಾನದಲ್ಲಿ ಐದು ಪ್ರಕಾರ : ೧. ನಿರ್ಭಾವನಿರೀಕ್ಷಣೆ, ೨. ಏಕತಾನತೆ, ೩. ವಿಚಾರ ಮಗ್ನತೆ, ೪. ಅಖಂಡಾವಧಾನ, ೫. ಸದ್ಭಾವಯೋಗ.

ನಿರ್ಭಾವನಿರೀಕ್ಷಣೆ ಎಂದರೆ ಮನದಲ್ಲಿ ರಾಗಾದಿ ಯಾವ ಭಾವನೆಗಳೂ ಇಲ್ಲದೆ ವಸ್ತುಗಳನ್ನು ನೋಡುವುದು. ಎಂದರೆ ಭಾವರಹಿತವಾಗಿ ಜಗತ್ತನ್ನು ನೋಡುತ್ತಾ ಹೋಗುವುದು. ಅದಕ್ಕೆ ಸಹಜನೋಟ ಎಂದೂ ಕರೆಯುತ್ತಾರೆ.

ಸಾಮಾನ್ಯವಾಗಿ ನಾವು ಜಗತ್ತಿನತ್ತ ರಾಗಾದ್ವೇಷಾದಿ ಭಾವನೆಗಳಿಂದ ನೋಡುತ್ತೇವೆ. ಒಂದು ವಸ್ತು ಸುರೂಪವೆಂದು ಇಲ್ಲವೆ ಕುರೂಪವೆಂದು ಭಾವಿಸಿ ನೋಡುತ್ತೇವೆ. ಇದು ನಮ್ಮದು ಅಥವಾ ನಮ್ಮದಲ್ಲ ಎಂಬ ಭಾವದಿಂದ ನೋಡುತ್ತೇವೆ. ಆಗ ನಮ್ಮಲ್ಲಿ ರಾಗಾದ್ವೇಷಾದಿ ಭಾವನೆಗಳು ಮಟಿದೇಳುತ್ತವೆ. ನಾವು ಬಂಧನಕ್ಕೆ ಒಳಗಾಗುತ್ತೇವೆ. ಆದರೆ ಭಾವರಹಿತನಾಗಿ ಈ ಜಗತ್ತಿನತ್ತ ಸಹಜವಾಗಿ ನೋಡಿದರೆ ರಾಗದ್ವೇಷಾದಿ ಭಾವನೆಗಳು ಸುಳಿಯುವುದಿಲ್ಲ. ಆಗ ಬಂಧನದ ಪ್ರಶ್ನೆಯೇ ಇಲ್ಲ ! ಇದರಲ್ಲಿಯೂ ನೋಟವಿರುತ್ತದೆ. ಜಗತ್ತಿನ ನಿರೀಕ್ಷಣೆ ಇರುತ್ತದೆ. ಆದರೆ ಭಾವವು ಇರುವುದಿಲ್ಲ. ಅದೇ ನಿರ್ಭಾವ ನಿರೀಕ್ಷಣೆ !

ಒಂದು ಊರು. ಅಲ್ಲೊಂದು ಸಿರಿವಂತರ ಮನೆ. ಆ ಮನೆಯಲ್ಲಿ ಒಬ್ಬ ತರುಣ. ಆತ ವಿವಾಹಿತ. ಸುಂದರ ಸತಿ ಮುದ್ದಾದ ಮಗು. ಆ ಮಗುವಿನ ಬಾಲಲೀಲೆಗಳಲ್ಲಿ ಸ್ವರ್ಗಸುಖವನ್ನು ಕಾಣುತ್ತಾ ನವದಂಪತಿಗಳು ಸೊಗಸಾದ ಜೀವನ ಕಳೆಯುತ್ತಿದ್ದರು.

ಒಂದು ದಿನ ತರುಣನು ಬುದ್ಧ ವಿಹಾರಕ್ಕೆ ಹೋದ. ಬುದ್ಧನು ಆಶ್ರಮದಲ್ಲಿ ಒಂದು ಮರದಡಿ ಕುಳಿತಿದ್ದ. ಇದೇ ಮೊದಲನೆಯ ಬಾರಿ ಶಾಂತಿ ದೂತನನ್ನು ನೋಡಿದ. ಬುದ್ಧನ ಮಂದಸ್ಮಿತವಾದ ಪ್ರಸನ್ನ ತೇಜೋಮುಖವನ್ನು ಕಂಡು ತರುಣನು ಮುಗ್ಧನಾಗಿ ಕುಳಿತನು. ಸಂಜೆಯ ಸಮಯ, ಸೂರ್ಯ ಕೆಳಗಿಳಿದು ಹೋದ. ಆನಂದನು ದೀಪಹೊತ್ತಿಸಿ, ಕಟ್ಟೆಯ ಮೇಲೆ ತಂದಿಟ್ಟ. ಸುಳಿಗಾಳಿ ಬೀಸುತ್ತಿದೆ. ಆನಂದನು ದೀಪವನ್ನು ಕಾಪಾಡುತ್ತಿದ್ದಾನೆ. ಸಾವಿರ-ಸಾವಿರ ಜನರು ಶಾಂತರಾಗಿ ಬುದ್ಧನ ಉಪದೇಶವನ್ನು ಆಲಿಸುತ್ತಿದ್ದಾರೆ. ತರುಣನೂ ಮೈಮರೆತು ಬುದ್ಧನ ನಿರ್ವಾಣವಾಣಿಯನ್ನು ಸವಿಯುತ್ತಿದ್ದಾನೆ.

ಒಂದು ಹಂತದಲ್ಲಿ ಕಟ್ಟೆಯ ಮೇಲಿಟ್ಟಿದ್ದ ದೀಪವು ಆರಿ ಸುತ್ತಲೂ ಕತ್ತಲೆ ಕವಿಯಿತು. ಆಗ ಬುದ್ಧ ಭಗವಾನರು ಸಮಯೋಚಿತವಾಗಿ ನುಡಿದರು. 'ಇದುವೇ ನಿರ್ವಾಣ ! ಮರೆಯಾಗುವುದೇ ನಿರ್ವಾಣ. ಈಗ ದೀಪವು ನಿರ್ವಾಣ ಹೊಂದಿತು. ಹಾಗೆ ಜಗತ್ತಿನಲ್ಲಿ ಏನೇನು ಉರಿಯುತ್ತಿ ದೆಯೋ ಅದೆಲ್ಲವೂ ಈ ದೀಪದಂತೆ ಒಂದು ದಿನ ಆರಿ ಹೋಗುತ್ತದೆ. ಅಂತೆಯೇ ಜಗತ್ತಿನ ಎಲ್ಲ ಜೀವ ಜ್ಯೋತಿಗಳೂ ನಂದುತ್ತವೆ. ಅದುವೇ ಪರಮನಿರ್ವಾಣ !'

ಪ್ರಪಂಚವನ್ನು ಅತ್ಯಂತ ಪ್ರೀತಿಸುತ್ತಿದ್ದ ಆ ತರುಣನ ಮೇಲೆ ಈ ನಿರ್ವಾಣ ವಾಣಿಯು ಅಗಾಧಪರಿಣಾಮ ಮಾಡಿತ್ತು. ತರುಣನ ಕಣ್ಣು ಮುಂದೆ ಆತನ ಮಗುವೆಂಬ ದೀಪ, ಸತಿ ಎಂಬ ದೀಪ ಎಲ್ಲವೂ ಆರಿಹೋದಂತೆ ಕಾಣಿಸಿತು ! ಸಮಸ್ತ ಪ್ರಪಂಚವೇ ಬಯಲಾಗಿತ್ತು ! ಆತ ಪರಮನಿರ್ವಾಣವನ್ನು ಅನುಭವಿಸಿದ್ದ !

ಬುದ್ಧನ ಪ್ರವಚನ ಮುಗಿಯಿತು. ಜನಸ್ತೋಮವೆಲ್ಲ ಕರಗಿತು. ತರುಣನು ಮಾತ್ರ ಗಟ್ಟಿಯಾಗಿ ಕುಳಿತಿದ್ದ. ವಾತಾವರಣವೆಲ್ಲವೂ ಶಾಂತವಾದ ಮೇಲೆ ತರುಣನು ಬುದ್ಧ ಭಗವಾನರ ಬಳಿ ಹೋಗಿ ವಂದಿಸಿ, 'ಬುದ್ಧಂ ಶರಣಂ ಗಚ್ಛಾಮಿ !' ಎಂದ. 'ಯಾರದು ?' ಎಂದ ಬುದ್ಧ. 'ನಾನೊಂದು ದೀಪ ! ಎಲ್ಲರಂತೆ ಆರುವ ದೀಪ' ಎಂದ ತರುಣ. 'ಮನೆಯಲ್ಲಿ ಸತಿಸುತರು ಇರಬೇಕಲ್ಲ?' ಎಂದ ಬುದ್ಧ, 'ಅವರೆಲ್ಲರೂ ಆರುವ ದೀಪಗಳೇ ! ಎಂದ ತರುಣ.

ಬುದ್ಧ ಭಗವಾನರು ಆ ತರುಣನ ಕಣ್ಣಲ್ಲಿ ನಿರ್ವಾಣದ ದೃಷ್ಟಿಯು ಬಂದಿರುವುದನ್ನು ಗುರುತಿಸಿದರು. ಅದೇ ದಿನ ರಾತ್ರಿ ಅವನಿಗೆ ಚೀವರನ್ನಿತ್ತು ಆಶೀರ್ವದಿಸಿದರು. ಸಂಘದಲ್ಲಿ ಪ್ರವೇಶವನ್ನಿತ್ತರು. ಊರಲ್ಲೆಲ್ಲ ಸುದ್ದಿ. ತಂದೆ ತಾಯಿ, ಸತಿಸುತರು, ಬಂಧು-ಬಾಂಧವರು ತಂಡೋಪತಂಡವಾಗಿ ಬಂದರು. ತರುಣ ಸನ್ಯಾಸಿಯನ್ನು ಕಂಡು ಕಣ್ಣೀರುಗರೆದರು. ಸಾಕಷ್ಟು ತಿಳಿಹೇಳಿಯೂ ನೋಡಿದರು. ತರುಣನು ಮಾತ್ರ ಒಂದಿಷ್ಟೂ ವಿಚಲಿತನಾಗದೆ ಎಲ್ಲವನ್ನೂ ಸುಮ್ಮನೇ ನೋಡುತ್ತಿದ್ದ. ಜನರೆಲ್ಲ ನಿರುಪಾಯರಾಗಿ ಮರಳಿದರು.





ಕೊನೆಯ ಉಪಾಯವೆಂದು ಅವನ ಸತಿಯು ಸಂಜೆ ಎಳೆಮಗುವನ್ನು ಎತ್ತಿಕೊಂಡು ಆಶ್ರಮಕ್ಕೆ ಬಂದಳು. ಬೆಳದಿಂಗಳ ರಾತ್ರಿ, ಎಲ್ಲರೂ ವಿಶ್ರಮಿಸುತ್ತಿದ್ದರು. ವಾತಾವರಣ ಶೂನ್ಯವಾಗಿದೆ. ತರುಣನೊಬ್ಬನೆ ಗಿಡದಡಿ ನಿರ್ಭಾವನಿರೀಕ್ಷಣೆಯ ಧ್ಯಾನದಲ್ಲಿದ್ದ ! ಸುಂದರ ಸತಿಯು ಮುದ್ದು ಮಗುವನ್ನು ಅವನ ಎದುರಿಗಿಟ್ಟು 'ಇದು ನಿಮ್ಮದೇ ಮಗು !' ಎಂದು ಹೇಳಿದಳು. ಈಗಲೂ ತರುಣನು ಸುಮ್ಮನೇ ನೋಡುತ್ತಿದ್ದಾನೆ. ಮುದ್ದಾದ ಮಗುವನ್ನು ನೋಡಿ ಒಂದಿಷ್ಟೂ ಪ್ರತಿಕ್ರಿಯೆ ತೋರದ ಪತಿಯನ್ನು ಕಂಡು ಸತಿಯು ಬೇಸರಗೊಂಡಳು. 'ನಿಮ್ಮ ಮಗುವನ್ನು ನಿಮ್ಮ ಮುಂದೆ ಇಟ್ಟಿದ್ದೇನೆ. ಏನಾದರೂ ಮಾಡಿ' ಎಂದು ಹೇಳಿ ಹೊರಟು ಹೋದಳು.

ಸ್ವಲ್ಪದೂರ ಹೋಗಿ ಗಿಡದ ಮರೆಗೆ ನಿಂತು ನೋಡಿದಳು. ಮಗುವು ಒಮ್ಮೆ ನಗುತ್ತದೆ. ಮತ್ತೊಮ್ಮೆ ಅಳುತ್ತದೆ. ತರುಣನು ಮಾತ್ರ ಸುಮ್ಮನೆ ನೋಡುತ್ತಿದ್ದಾನೆ. ಎಳೆಯಮಗು ಅತ್ತಾಗಲೆಲ್ಲ ತಾಯಿಯ ಕರುಳು ಕಿವುಚಿದಂತಾಗುವುದು. ತರುಣನು ಮಾತ್ರ ನಿರ್ಭಾವದ ನಿರೀಕ್ಷಣೆಯಲ್ಲಿ ಸ್ಥಿರವಾಗಿಯೇ ಉಳಿದುಬಿಟ್ಟ ! ನಿರುಪಾಯಳಾದ ಸತಿಯು 'ಇದು ಜಡದೇಹ. ಇಲ್ಲಿ ನನ್ನ ಪತಿದೇವನಿಲ್ಲ !' ಎಂದು ಮಗುವನ್ನೆತ್ತಿಕೊಂಡು ನಡೆದಳು.

ಆ ತರುಣನದು ನಿರ್ಭಾವನಿರೀಕ್ಷಣೆ. ನಮ್ಮ ಕಣ್ಣೆದುರು ಸತಿಸುತರಲ್ಲ; ಹತ್ತು ಪೈಸೆ ಇಟ್ಟುನೋಡಿ ! ಕಣ್ಣಲ್ಲಿ ರಾಗಾದಿ ಭಾವನೆಗಳನ್ನಿಟ್ಟುಕೊಂಡು ನೋಡಿದರೆ ಈ ಜಗತ್ತು ಬಂಧನಕಾರಿ. ಅದೇ ಜಗತ್ತನ್ನು ನಾವು 'ನಿರ್ಭಾವದಿಂದ ನಿರೀಕ್ಷಿಸಿದರೆ' ಮುಕ್ತಿಗೆ ಸಹಕಾರಿ !

ಹೃದಯ ವಿಕಾರ ಆಗದಂತೆ, ಮನಸ್ಸು ಕೆಡದಂತೆ ಈ ಜಗತ್ತಿನತ್ತ ಸಹಜವಾಗಿ ನೋಡುವುದು. ಇಬ್ಬರು ಕುಸ್ತಿಯ ಆಟವಾಡುತ್ತಿದ್ದಾರೆ. ಅವರಲ್ಲಿ ಯಾರ ಪಕ್ಷವನ್ನೂ ಹಿಡಿಯದೆ ನಾವು ಸುಮ್ಮನೆ ನೋಡಬೇಕು. ಆಗ ಯಾರೇ ಗೆದ್ದರೂ ನಮಗೆ ಸಂತೋಷವೇ ಕಾದಿರುತ್ತದೆ ! ಇದು ನಿರ್ಭಾವ ನಿರೀಕ್ಷಣಾಧ್ಯಾನ ! ಕಣ್ಣುಮುಚ್ಚಿ ಕೈ ಕಟ್ಟಿಕೂಡುವಾಗಷ್ಟೇ ಧ್ಯಾನವಲ್ಲ. ನಾವು ದೈನಂದಿನ ಕಾರ್ಯಗಳಲ್ಲಿ ನಿರತರಾಗಿರುವಾಗಲೇ ಆಚರಿಸಬಹುದಾದ ಆದರ್ಶಧ್ಯಾನ !

ದೂರದ ಊರಿಗೆ ಹೋಗುವವರು ಬಸ್ಸಿಗಾಗಿ ಧಾವಿಸುತ್ತಾರೆ. ಅವರಿಗೆ ಬಸ್ಸು ದೊರೆತರೆ ಸಂತಸ. ದೊರೆಯದಿದ್ದರೆ ಬೇಸರ. ಹೊರಗೆ ನಿಂತು ನೋಡುವವರಿಗೆ ಬಸ್ಸು ಯಾರಿಗೆ ದೊರೆತರೂ ಅಷ್ಟೆ, ದೊರಕದಿದ್ದರೂ ಅಷ್ಟೆ. ಸದಾ ಸಂತೃಪ್ತಿ, ಸಮಾಧಾನ. ಹಾಗೆಯೇ ನಾವು ಜೀವನದಲ್ಲಿ ಪ್ರೇಕ್ಷಕರಾಗಿ ಇರುವುದಾದರೆ ನಾವು ಸುರಕ್ಷಿತವಾಗಿ ಇರುತ್ತೇವೆ.

ಮನೆಯಲ್ಲಿ ತಾಯಂದಿರು ದಿನವಿಡೀ ದುಡಿಯುತ್ತಾರೆ. ಎಲ್ಲರಿಗೂ ಊಟೋಪಚಾರ ಮಾಡಿಸುತ್ತಾರೆ. ಇಷ್ಟೆಲ್ಲಾ ಮಾಡಿಯೂ ಮಾಡದಂತೆ ಇದ್ದರೆ ಅವರಿಗೆ ಸಮಾಧಾನ. ಹಾಗಲ್ಲದೆ ಈ ಕೆಲಸವನ್ನೆಲ್ಲಾ ನಾನೇ ಮಾಡಿದೆ ಎಂದರೆ, ಮನೆಯವರು ಗುರುತಿಸದಿದ್ದರೆ ತಾಯಂದಿರರಿಗೇ ಅಸಮಾಧಾನ. ನಿರ್ಭಾವ ನಿರೀಕ್ಷಣೆಯಿಂದ ಸಂಸಾರವು ಸುಂದರವಾಗುತ್ತದೆ.

ಗುಡಿಗುಂಡಾರಗಳಿಗೆ ನಾವು ಹೋಗುತ್ತೇವೆ. ದೇವರಿಗೆ ಕೈಮುಗಿದು ಕಾಯಿ ಕರ್ಪೂರ ಮಾಡಿಸುತ್ತೇವೆ. ನಾವು ಏನೇ ಮಾಡಿದರೂ, ಮಾಡದಿದ್ದರೂ ದೇವರು ಸುಮ್ಮನೆಯೇ ಇರುತ್ತಾನೆ. ಇದು ಹೆಚ್ಚು, ಇದು ಕಡಿಮೆ, ಹಾಗೆ ಹೀಗೆ ಎಂದು ದೂರುವುದಿಲ್ಲ. ನಮ್ಮ ಭಕ್ತಿಭಾವವನ್ನೆಲ್ಲ ಸುಮ್ಮನೆ ನೋಡುತ್ತಾ ಸಾಕ್ಷಿ ರೂಪದಿಂದ ಇರುತ್ತಾನೆ. ಅಂತೆಯೇ ಭಗವಂತನ ಮೇಲೆ ನಮಗೆಲ್ಲಾ ಅಷ್ಟೊಂದು ಭಕ್ತಿ ! ಆತನದು ನಿಜವಾದ ನಿರ್ಭಾವ ನಿರೀಕ್ಷಣೆ !!

ಈ ನಿರ್ಭಾವ ನಿರೀಕ್ಷಣೆಯ ಧ್ಯಾನವನ್ನಾಚರಿಸಲು ನಾವು ಬೆಟ್ಟಗುಡ್ಡಗಳಿಗೆ ಹೋಗಬೇಕಾಗಿಲ್ಲ. ಊರು ಮನೆಯಲ್ಲಿದ್ದೇ ಈ ಪ್ರಪಂಚರವನ್ನು ಸಹಜ ದೃಷ್ಟಿಯಿಂದ ನೋಡಿದರಾಯಿತು. ಇದಕ್ಕೆ ಆಸನ, ಪ್ರಾಣಾಯಾಮ, ಮಂತ್ರಪಠಣ ಮಾಡಬೇಕಾಗಿಲ್ಲ. ಕುಂತಲ್ಲೇ ನಿಂತಲ್ಲೇ ಅನುಸರಿಸಬಹುದಾದ ಸುಲಭ ಧ್ಯಾನ !

ಪ್ರಪಂಚದಲ್ಲಿ ಯಾವುದೇ ಎಡರು, ತೊಡರುಗಳು ಬಂದಾಗ ಮನಸ್ಸಿಗೆ ವೇದನೆಯಾಗುತ್ತದೆ. ಆಗ ಒಂದು ಕ್ಷಣ ನಾವು ನಿರ್ಭಾವ ನಿರೀಕ್ಷಣೆ ಮಾಡಿದರೆ ಸಾಕು. ನಮ್ಮ ವೇದನೆಯೆಲ್ಲಾ ಮಾಯವಾಗುತ್ತದೆ. ಹೀಗೆ ದಿನವಿಡೀ ದುಡಿತ; ದಣಿವಾದಾಗ, ನೋವಾದಾಗ ಮಾತ್ರ ನಿರ್ಭಾವ ನಿರೀಕ್ಷಣೆ ! ಅದುವೇ ಧ್ಯಾನಜೀವನ ! ಅದರಿಂದ ನಮ್ಮ ಆತ್ಮಜ್ಞಾನವು ಸಬಲವೂ ಸಚೇತನಗೊಳ್ಳುತ್ತದೆ ! ನಾನಾರೆಂದರಿಯುವುದಕ್ಕೆ, ಕೈವಲ್ಯಸಿದ್ಧಿಗೆ ಕಾರಣವಾಗುತ್ತದೆ !!

(ಕೃಪೆ: ನಾನಾರು?)





॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥







ಅವಾಚ್ಯಾತ್ಮ ಸ್ವರೂಪಾಯ ಶಿವಭಾವ ಪ್ರದಾಯಿನೇ ।
ನಮಸ್ಸದ್ಗುರುನಾಥಾಯ ಷಟ್ಸ್ಥಲ ಬ್ರಹ್ಮಮೂರ್ತಯೇ ॥

# ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಜಾತ್ರಾ ಮಹೋತ್ಸವ ಆಹ್ವಾನ ಪತ್ರಿಕಾ

## ಶ್ರೀ ಸಿದ್ಧಗಂಗಾ ಮಠ, ತುಮಕೂರು - 572 104

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ 1939ನೇ ಶ್ರೀ ಹೇವಿಳಂಬಿನಾಮ ಸಂವತ್ಸರ

| | | | | |
|---|---|---|---|---|
| ಮಾಘ ಬಹುಳ ಸಪ್ತಮಿ | 07-02-2018 | ಬುಧವಾರ | ರಾತ್ರಿ | ಶ್ರೀ ಗೋಸಲಸಿದ್ಧೇಶ್ವರಸ್ವಾಮಿ ಉತ್ಸವ ಮತ್ತು |
| | | | ,, | ಶೂನ್ಯ ಸಿಂಹಾಸನಾರೋಹಣೋತ್ಸವ ಮತ್ತು ವೃಷಭ ವಾಹನ |
| ಮಾಘ ಬಹುಳ ಅಷ್ಟಮಿ | 08-02-2018 | ಗುರುವಾರ | ,, | ನಂದಿವಾಹನ ಮತ್ತು ಗಜ ವಾಹನ |
| ಮಾಘ ಬಹುಳ ನವಮಿ | 09-02-2018 | ಶುಕ್ರವಾರ | ,, | ಹುಲಿವಾಹನ ಮತ್ತು ಸಿಂಹವಾಹನ |
| ಮಾಘ ಬಹುಳ ದಶಮಿ | 10-02-2018 | ಶನಿವಾರ | ,, | ಹುತ್ತದವಾಹನ ಮತ್ತು ಶೇಷವಾಹನ |
| ಮಾಘ ಬಹುಳ ಏಕಾದಶಿ | 11-02-2018 | ಭಾನುವಾರ | ,, | ಅಶ್ವವಾಹನ ಮತ್ತು ನವಿಲು ವಾಹನ |
| ಮಾಘ ಬಹುಳ ದ್ವಾದಶಿ | 12-02-2018 | ಸೋಮವಾರ | ,, | ರಾವಣವಾಹನ, ಬಿಲ್ವವೃಕ್ಷವಾಹನ ಮತ್ತು ನವರಂಗಪಾಲಕಿ ಉತ್ಸವ |
| ಮಾಘ ಬಹುಳ ತ್ರಯೋದಶಿ | 13-02-2018 | ಮಂಗಳವಾರ | | ಮಹಾಶಿವರಾತ್ರಿ ಪೂಜಾದಿಗಳು |
| | | | ,, | ಬೆಳ್ಳಿರಥೋತ್ಸವ ಹಾಗೂ ಮುತ್ತಿನ ಪಾಲಕಿಉತ್ಸವ |
| ಮಾಘ ಬಹುಳ ಚತುರ್ದಶಿ | 14-02-2018 | ಬುಧವಾರ | ಬೆಳಿಗ್ಗೆ | ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮಹಾರಥೋತ್ಸವ |
| | | | ಸಂಜೆ | ರುದ್ರಾಕ್ಷಿ ಮಂಟಪೋತ್ಸವ |
| ಮಾಘ ಬಹುಳ ಅಮಾವಾಸ್ಯೆ | 15-02-2018 | ಗುರುವಾರ | ರಾತ್ರಿ | 11ಗಂಟೆಗೆ ಬೆಳ್ಳಿಪಾಲಕಿ ಉತ್ಸವ |
| ಫಾಲ್ಗುಣ ಶುದ್ಧ ಪಾಡ್ಯ | 16-02-2018 | ಶುಕ್ರವಾರ | ರಾತ್ರಿ | ತೆಪ್ಪೋತ್ಸವ ಮತ್ತು ಪಂಚಬ್ರಹ್ಮೋತ್ಸವ |

ಮಾಮೂಲಿನಂತೆ ದಿನಾಂಕ 07-02-2018 ಬುಧವಾರದಿಂದ ಎತ್ತುಗಳ ಪರಿಷೆಯು ಪ್ರಾರಂಭವಾಗುತ್ತದೆ. ದನಗಳ ಪ್ರದರ್ಶನ
ಮತ್ತು ಉತ್ತಮ ರಾಸುಗಳಿಗೆ ಬಹುಮಾನ ವಿತರಣೆ ಇರುತ್ತದೆ. ಪ್ರತಿದಿನ ಸಂಜೆ ಸಾಮೂಹಿಕ ಪ್ರಾರ್ಥನೆ ನಂತರ ವಿಶೇಷ
ಧಾರ್ಮಿಕ ಉಪನ್ಯಾಸಗಳು ಹಾಗೂ "ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ" ದಲ್ಲಿ ಪ್ರತಿದಿನವೂ ಸಾಯಂಕಾಲ
"ಸಾಂಸ್ಕೃತಿಕ ಚಟುವಟಿಕೆಗಳೂ" ನಡೆಯುತ್ತವೆ. ಸರ್ವರೂ ಎಲ್ಲಾ ಕಾರ್ಯಕ್ರಮಗಳಲ್ಲಿ ಭಾಗವಹಿಸಿ
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಕೃಪೆಗೆ ಪಾತ್ರರಾಗಬೇಕಾಗಿ ಅಪೇಕ್ಷಿಸುತ್ತೇವೆ.

**ಶ್ರೀ.ಮ.ನಿ.ಪ್ರ.ಸ್ವ. ಶ್ರೀ ಶಿವಕುಮಾರಸ್ವಾಮಿಗಳು**
ಶ್ರೀ ಸಿದ್ಧಗಂಗಾಮಠ.

**ಶ್ರೀ ಸಿದ್ಧಲಿಂಗಸ್ವಾಮಿಗಳು**
ಅಧ್ಯಕ್ಷರು, ಶ್ರೀ ಸಿದ್ಧಗಂಗಾಮಠ.







ಜಾತ್ರೆ

# ನಾಡಿನ ಸಂಸ್ಕೃತಿ ಸಂಪದ ಶ್ರೀ ಸಿದ್ಧಗಂಗಾ ಜಾತ್ರೆ



– ಪ್ರೊ. ಹೆಚ್.ವಿ. ವೀರಭದ್ರಯ್ಯ *

ಜಾತ್ರೆಗಳು ಸಂಸ್ಕೃತಿಯ ಉಗಮದ ಕೇಂದ್ರಗಳು. ಧರ್ಮ, ಕಲೆ, ಸಾಹಿತ್ಯಸ್ಫೂರ್ತಿ ನೆಲೆಗಳು, ಜೀವನೋತ್ಸಾಹದ ಕ್ರಿಯಾಮುಖಗಳು, ನಂಬಿಕೆಯ ನವೀಕರಣಕ್ಕೆ ಸ್ತಂಭ ದೀಪಗಳು. ಭಾರತೀಯರ ಜೀವನದಲ್ಲಿ ಪ್ರಮುಖ ಪಾತ್ರವಾಡುತ್ತ ಬಂದಿರುವ ಜಾತ್ರೆಗಳು ಕಾಲ-ದೇಶಗಳ ಪರಿಧಿಯನ್ನು ದಾಟಿ ಮುಂದುವರಿದು ಬಂದಿರುವುದನ್ನು ನೋಡಿದರೆ ಅವುಗಳ ಅಂತರಂಗದಲ್ಲಡಗಿರುವ ಜೀವನ ದರ್ಶನವಾಗದಿರದು. ಆನಂದಾನ್ವೇಷಣೆಗಾಗಿ ಮನುಷ್ಯ ರೂಪಿಸಿಕೊಂಡ ವ್ಯವಸ್ಥೆಯೇ ಜಾತ್ರೆಗಳು. **'ದುಡಿ ದುಡಿದು ಸತ್ತಾಗ, ಮನಕೆ ಬೇಸತ್ತಾಗ ಮನಕೆ ಹಿಗ್ಗಿನ ಹಾಡು'** ಹೇಳುವ ಈ ವ್ಯವಸ್ಥೆ ಇಂದು ನಿನ್ನೆಯದಲ್ಲ. ಮನುಷ್ಯನ ಆಸ್ತಿಕ ಮನೋಭಾವದೊಡನೆ ಮಿಳಿತವಾಗಿ ಬೆಳೆದು ಬಂದಿರುವ ದೈವೀ ಆರಾಧನೆಯ ಬಹಿರ್ಮುಖಗಳು. ಜಾತ್ರೆಗಳು ಒಂದು ದೃಷ್ಟಿಯಲ್ಲಿ ಅನೌಪಚಾರಿಕ ಸಾಂಸ್ಕೃತಿಕ ಸಮ್ಮೇಳನಗಳು, ಭಾವೈಕ್ಯತೆಯ ಸಮಾವೇಶಗಳು, ಪ್ರೀತಿ ವಿಶ್ವಾಸ, ಉಲ್ಲಾಸಗಳ ಸಂಗಮ ಸ್ಥಾನಗಳು. ಆದರೆ ಆಧುನಿಕ ಸಮ್ಮೇಳನಗಳಂತೆ ಕೃತಕ ಜೀವನದ ಸಂಕೇತಗಳಲ್ಲ. ಕೆಲವು ಬುದ್ಧಿಜೀವಿಗಳ ಆಂಬೋಣದಲ್ಲಿ **"ಜಾತ್ರೆ"ಗಳು** ಕೇವಲ ಜನಜಂಜುಳಿ. ಆದರೂ ಅದಕ್ಕೆ ಉದ್ದೇಶವಿರುತ್ತದೆ. ಜನಪದ ಸಂಸ್ಕೃತಿಯ ಸಂತೋಷ ಕೂಟಗಳಾಗಿರುತ್ತದೆ. ಸಂತೋಷದ ಜೀವ ದ್ರವ್ಯವಾಗಿ ದೈವೀ ಆರಾಧನೆಯಿರುತ್ತದೆ. ಜಾತ್ರೆಗಳು ಜಾನಪದದ ಹೃದಯ ಶ್ರೀಮಂತಿಕೆಯನ್ನು ತೆರೆದು ತೋರಿಸುವ ಸಂಸ್ಕೃತಿಯ ರಸಗವಾಕ್ಷಗಳು.

ಜಾತ್ರೆಗಳು ವೈವಿಧ್ಯಮಯವಾಗಿರುತ್ತದೆ. ಅವುಗಳಲ್ಲಿ ಉಗ್ರ ರೂಪದವುಗಳುಂಟು. ಸೌಮ್ಯ ರೂಪದವುಗಳುಂಟು. ಪ್ರಾಣಿಬಲಿ, ಪಕ್ಷಿಬಲಿ, ನರಬಲಿಗಳನ್ನು ಕೊಡುವ ಸಂಪ್ರದಾಯದ ಜಾತ್ರೆಗಳಿವೆ. ಆದರೆ ಇತ್ತೀಚೆಗೆ ಪ್ರಾಣಿಬಲಿ, ನರಬಲಿಯನ್ನಾಚರಿಸುವ ಸಂಪ್ರದಾಯ ನಿಷಿದ್ಧ, ಕಾನೂನು ಬಾಹಿರ, ಹೀಗಿದ್ದೂ ಜನತೆಯ ಅಜ್ಞಾನದಿಂದಾಗಿ ಅಲ್ಲಲ್ಲಿ ಆಗೊಮ್ಮೆ ಈಗೊಮ್ಮೆ ಇಂಥ ಬಲಿಮೂಲ ಜಾತ್ರೆಗಳು ನಡೆಯುತ್ತಿರುವುದು ಕೇಳಿ ಬರುತ್ತದೆ. ಕನ್ಯಾಕುಮಾರಿಯಿಂದ ಹಿಮಾಲಯದವರೆಗೆ ವರ್ಷದ ಎಲ್ಲಾ ದಿನಗಳಲ್ಲಿ ಒಂದಲ್ಲ ಒಂದು ಜಾತ್ರೆ ಇರುತ್ತದೆ.

* ಸಂಪಾದಕರು, ಸಿದ್ಧಗಂಗಾ ಮಾಸಪತ್ರಿಕೆ







ಕರ್ನಾಟಕದಲ್ಲಿ ಜಾತ್ರೆಗಳು ಪ್ರಸಿದ್ಧವಾಗಿವೆ. ವೈಶಿಷ್ಟ್ಯತೆಯನ್ನು ಬೆಳೆಸಿಕೊಂಡು ಬಂದಿವೆ. ಒಂದೊಂದು ಜಾತ್ರೆಗೆ ಒಂದೊಂದು ವೈಶಿಷ್ಟ್ಯವಿರುತ್ತದೆ. ಉತ್ತರ ಕರ್ನಾಟಕದಲ್ಲಿ ಬಹುತೇಕವಾಗಿ ಶರಣರ ಬಸವಾದಿ ಪ್ರಮಥರ ಜಾತ್ರೆಗಳು ಜರುಗಿದರೆ, ದಕ್ಷಿಣ ಕರ್ನಾಟಕದಲ್ಲಿ ದೇವರ ಜಾತ್ರೆಗಳು ನಡೆಯುತ್ತವೆ. ಶಿವಶರಣರ ಜಾತ್ರೆಗಳೂ ನಡೆಯುತ್ತವೆ. ಯಡಿಯೂರು ಸಿದ್ಧಲಿಂಗೇಶ್ವರ ಜಾತ್ರೆ, ಗುಬ್ಬಿಯ ಚನ್ನಬಸವೇಶ್ವರ ಜಾತ್ರೆ, ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿ ಜಾತ್ರೆ, ಶಿವಗಂಗೆಯ ಗಂಗಾಧರೇಶ್ವರನ ಜಾತ್ರೆ, ಮಾಗಡಿ ರಂಗನಾಥನ ಜಾತ್ರೆ, ಮಹಿಮಾ ರಂಗನಜಾತ್ರೆ, ಸಿದ್ಧಗಂಗೆಯ ಶ್ರೀ ಸಿದ್ಧಲಿಂಗೇಶ್ವರ ಜಾತ್ರೆ, ಹಾಸನದ ಹಾಸನಾಂಬ ಜಾತ್ರೆ – ಈ ಪಟ್ಟಿ ಬೆಳೆಯುತ್ತದೆ. ಜಾತ್ರೆ ಜರುಗದ ಊರಿಲ್ಲವೆನ್ನಬಹುದೇನೋ !



ಶ್ರೀ ಸಿದ್ಧಗಂಗಾ ಮಠ ತ್ರಿವಿಧ ದಾಸೋಹ ಕೇಂದ್ರ. ಜ್ಞಾನಾನ್ನ ಶಿಕ್ಷಣ ದಾಸೋಹಗಳ ಸಂಗಮ. ಎಂಟುನೂರು ವರ್ಷಗಳ ಇತಿಹಾಸವುಳ್ಳ ತಪೋಭೂಮಿ, ನಡೆದಾಡುವ ದೇವರಿರುವ ಪುಣ್ಯಧಾಮ. ಮಾನವೀಯತೆಯ ತಲಕಾವೇರಿ, ಶ್ರೀ ಗೋಸಲ ಸಿದ್ಧೇಶ್ವರ ತಪೋನಿಷ್ಠೆಯಿಂದ ಉದ್ಭವವಾದ ಗಂಗೆಯೇ 'ಸಿದ್ಧಗಂಗೆ'. ಪ್ರಾಣಾಂತಿಕ ಸ್ಥಿತಿಯಲ್ಲಿದ್ದ ಜೀವವನ್ನು ಬಂಡೆಯಿಂದೆದ್ದು ಬಂದು ಪ್ರಾಣ ಕಸುವನ್ನೂಡಿದ ಮಹಿಮಾ ಸ್ಥಳವೆಂದೇ ಪ್ರಖ್ಯಾತಿ. ಅಂದಿನಿಂದಲೂ ಜೀವ ಜಲ, ಅನ್ನ, ಜ್ಞಾನ ದಾಸೋಹ ಮಾಡುತ್ತಿರುವ ಸೇವಾಕೇಂದ್ರ. ಶ್ರೀ ಸಿದ್ಧಗಂಗಾ ಗುರು ಪರಂಪರೆ ದೊಡ್ಡದು. ೧೬ನೇ ಶತಮಾನದಿಂದೀಚೆಗೆ ಶ್ರೀ ಶಿವಯೋಗಿ ಪುಂಗವರಿಂದ ಪುನೀತವಾದುದು. ಶ್ರೀ ಉದ್ಧಾನ ಸ್ವಾಮಿಗಳು ಮತ್ತು ಸಿದ್ಧಲಿಂಗೇಶ್ವರರು, ಶ್ರೀ ಆಟವಿ ಸ್ವಾಮಿಗಳು, ಶ್ರೀ ಉದ್ಧಾನ ಸ್ವಾಮಿಗಳು ಹರಗುರು ಪರಂಪರೆಯನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಹರಗುರು ಪರಂಪರೆಯನ್ನು ಬೆಳಗುತ್ತ ಬಂದಿರುವ ಮಹಾಮಹಿಮರು.

ಶ್ರೀ ಆಟವೀ ಸ್ವಾಮಿಗಳವರು ಶ್ರೀಮಠದಲ್ಲಿ ಶಿವಯೋಗಾನುಷ್ಠಾನವನ್ನು ನಡೆಸಿ ದಾಸೋಹದ ಒಲೆ ಹಚ್ಚಿದರು. ಸೇವಾ ಪ್ರಣತಿಯನ್ನು ಮುಡಿಸಿದರು. ಮಾನವೀಯತೆಯ ಮಣಿಹಕ್ಕೆ ಕ್ಷೇತ್ರವನ್ನು ಅಣಿಗೊಳಿಸಿದ ಅವರ ನಂತರ ಶ್ರೀಮಠದ ಧರ್ಮ ಪ್ರಭುಗಳಾಗಿ ಬಂದ ಶ್ರೀ ಉದ್ದಾನ ಶಿವಯೋಗಿಗಳು ೧೯೧೭ ರಲ್ಲಿಯೇ ಸಂಸ್ಕೃತ ಪಾಠಶಾಲೆಯನ್ನು ಎಲ್ಲರಿಗೆ ತೆರೆದ ಕರುಣಾಳುಗಳು. ಅವರೇ



೧೯೦೨ ರಲ್ಲಿ ಪ್ರತಿ ವರ್ಷವೂ ಮಹಾಶಿವರಾತ್ರಿ ಸಂದರ್ಭದಲ್ಲಿ ಸುಮಾರು ಹತ್ತು ದಿನಗಳ ಕಾಲ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ಜಾತ್ರೆಯನ್ನು ನಡೆಸುವುದನ್ನು ಪ್ರಾರಂಭಿಸಿದ ಮಹಾನುಭಾವರು. ಜಾತ್ರೆ, ಜನ-ಜಾನುವಾರುಗಳ ದೇವರ ಉತ್ಸವಗಳ ಸಾಂಸ್ಕೃತಿಕ ಹಬ್ಬವಾಗುವಂತೆ ಮೊದಲಿಗೆ ಶ್ರಮಿಸಿದರು. ತಮ್ಮ ಕಾಲದಲ್ಲಿ ನಡೆಯುತ್ತಿದ್ದ ಸುತ್ತಮುತ್ತಿನ ಪ್ರದೇಶಗಳ ಜಾತ್ರೆಗಳಿಗೆ ತಾವೇ ಹೋಗಿ ಪ್ರಚಾರ ಮಾಡಿದ ದೂರದರ್ಶಿಗಳು. ಅಂದು ಚಿಕ್ಕ ಪ್ರಮಾಣದಲ್ಲಿ ಆರಂಭವಾದ ಜಾತ್ರೆ, ಇಂದು ಈಗಿನ ಮಠಾಧ್ಯಕ್ಷರಾಗಿರುವ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಅದ್ಭುತ ಶಕ್ತಿಯಿಂದಾಗಿ ಬೃಹತ್ತಾಗಿ ಮಹತ್ತಾಗಿ ಸುಮಾರು ಇಪ್ಪತ್ತು ದಿನಗಳವರೆಗೆ ವೈವಿಧ್ಯಮಯವಾಗಿ ಬಹುವರ್ಣರಂಜಿತವಾಗಿ ನಡೆದು ಬಂದಿದೆ.

ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಆಧುನಿಕ ಭಾರತ ಕಂಡ ರಾಷ್ಟ್ರರತ್ನ, ಭಾರತೀಯ ಪ್ರಾಚೀನ ಅರ್ವಾಚೀನಗಳ, ಜ್ಞಾನ-ವಿಜ್ಞಾನ, ಸಾಹಿತ್ಯ, ಸಂಗೀತ-ಕಲೆ-ಆಧ್ಯಾತ್ಮಗಳ ಅಪೂರ್ವ ಸಂಗಮ. ಹಳೆತು ಹೊಸತುಗಳ ಸಂತೋಷದ ಹೂವು. ಎಂದೆಂದೂ ಬಾಡದ ಶಿವಮೊಗ್ಗು. ಶ್ರೀಗಳವರು ತಮ್ಮ ಗುರುಗಳು ಆರಂಭಿಸಿದ ಎಲ್ಲಾ ಸೇವಾ ಚಟುವಟಿಕೆಗಳನ್ನು ನಿಬ್ಬೆರಗಾಗುವಂತೆ ಬೆಳೆಸಿದ ಪುಣ್ಯಜ್ಯೋತಿಗಳು. ಆರು ಸಾವಿರ ಮಕ್ಕಳಿಗೆ ಶಿಕ್ಷಣಕ್ಕನುಗುಣವಾಗುವಂತೆ ಅಶನ-ವಸತಿ ಕಲ್ಪಿಸಿರುವುದಲ್ಲದೆ, ೧೨೫ ಶಾಲಾ ಕಾಲೇಜುಗಳ ಸ್ಥಾಪನೆ, ಆಸ್ಪತ್ರೆ, ಮುದ್ರಣಾಲಯ, ಅಂಧ ಮಕ್ಕಳ ಕಲ್ಯಾಣಧಾಮ, ಗ್ರಾಮಾಂತರ ಬಸವ ಜಯಂತಿ ಯೋಜನೆ, ಸಾಹಿತ್ಯ ಪ್ರಕಾಶನ, ಪತ್ರಿಕಾ ಸೇವೆಗಾಗಿ **'ಸಿದ್ಧಗಂಗಾ'** ಮಾಸಿಕ ಪ್ರಕಟಣೆ, ಇವೆಲ್ಲವುಗಳಿಗೆ ತಿಲಕವೆಂಬಂತೆ ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದ ವ್ಯವಸ್ಥೆಯನ್ನು ರಾಷ್ಟ್ರಸೇವೆಯೆಂದು ಭಾವಿಸಿ ನಡೆಸಿಕೊಂಡು ಬಂದಿರುತ್ತಾರೆ. ಈ ಎಲ್ಲ ಸೇವೆಗಳ ಉತ್ತರಾಧಿಕಾರಿಗಳಾಗಿ ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳು ಹೆಜ್ಜೆಯಿಡುತ್ತಿದ್ದಾರೆ. ಪ್ರತಿವರ್ಷ ಮಹಾಶಿವರಾತ್ರಿ ಸಮಯದಲ್ಲಿ ನಡೆಯುವ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ಜಾತ್ರೆಯು ಶ್ರೀಕ್ಷೇತ್ರದ ಮೂಲ ಮಂಗಳ ಶಿವಯೋಗಿ ಶ್ರೀ ಗೋಸಲಸಿದ್ಧೇಶ್ವರ ಉತ್ಸವದೊಡನೆ ಆರಂಭವಾಗಿ ಪಂಚಬ್ರಹ್ಮೋತ್ಸವ ಶಿವಾನುಭವ ಸಮ್ಮೇಳನದೊಂದಿಗೆ ಮುಕ್ತಾಯವಾಗುತ್ತದೆ. ಉತ್ಸವಗಳು ಧಾರ್ಮಿಕ ಸಂಪ್ರದಾಯವನ್ನು ಅನುಸರಿಸಿ ನಡೆಯುತ್ತದೆ. ಮಹಾಶಿವರಾತ್ರಿಯ ಮರುದಿನ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ರಥೋತ್ಸವ ನಡೆಯುತ್ತದೆ. ಬೆಳ್ಳಿಪಲ್ಲಕ್ಕಿ ಉತ್ಸವ, ಮುತ್ತಿನಪಲ್ಲಕ್ಕಿ ಉತ್ಸವ, ರುದ್ರಾಕ್ಷಿ ರಥೋತ್ಸವ, ವೃಷಭ ವಾಹನೋತ್ಸವ, ತೆಪ್ಪೋತ್ಸವಗಳು ಬೇರೆ ಬೇರೆ ದಿನಗಳಲ್ಲಿ ನಡೆಯುತ್ತವೆ.

ರಥೋತ್ಸವ ಮತ್ತು ಬೆಳ್ಳಿ ಪಲ್ಲಕ್ಕಿ ಉತ್ಸವಗಳಲ್ಲಿ ಬೃಹತ್ ಪ್ರಮಾಣದ ಮದ್ದಿನ ಪಟಾಕಿಯ ಬೆಳಕಿನ ಪ್ರದರ್ಶನ ನಡೆಯುತ್ತದೆ. ಜಾತ್ರೆ ಮತ್ತು ಶ್ರೀಕ್ಷೇತ್ರದ ಆವರಣವೆಲ್ಲ ವಿದ್ಯುತ್ ದೀಪಾಲಂಕರದಿಂದ ಬೆಳಕಿನ ಲೋಕವನ್ನೇ ನಿರ್ಮಾಣ ಮಾಡಿರುತ್ತದೆ. ಜಾತ್ರೆಯ ವಿಶೇಷವೆಂದರೆ ಜಾತ್ರಾರ್ಥಿಗಳಿಗೆಲ್ಲ ಪ್ರತಿನಿತ್ಯ ದಾಸೋಹವಾಗಿರುತ್ತದೆ. **'ಸಿದ್ಧಗಂಗೆಯ ಊಟ ಚೆಂದ, ಶಿವಗಂಗೆಯ ನೋಟ ಚೆಂದ'** ಎಂಬ ಹಳೆಯ ನಾಣ್ನುಡಿಗೆ **"ಹೊಟ್ಟೆ ಹಸಿದವರು ಸಿದ್ಧಗಂಗೆಗೆ ಬರಬೇಕು, ಕಾಲುಗಟ್ಟಿಯಿದ್ದವರು ಶಿವಗಂಗೆ ಬೆಟ್ಟ ಹತ್ತಬೇಕು"** ಎಂದೆನ್ನುವುದನ್ನು ಸೇರಿಸಬಹುದು. ಈ ದಿನಗಳಲ್ಲಿ ಎಪ್ಪತ್ತು ರೂಪಾಯಿಗೆ ಒಂದು ಕೆ.ಜಿ. ಅಕ್ಕಿ, ಇಪ್ಪತ್ತು ರೂಪಾಯಿಗೆ ಒಂದು ಕೆ.ಜಿ. ರಾಗಿಯಾಗಿರುವ ತುಟ್ಟಿಯ ದಿನಗಳಲ್ಲಿಯೂ ಶ್ರೀ ಸಿದ್ಧಗಂಗೆಯ ಪೂಜ್ಯರು ಲಕ್ಷಾಂತರ ಜಾತ್ರಾರ್ಥಿಗಳಿಗೆ ಜಾತ್ರಾವಧಿಯುದ್ದಕ್ಕೂ ಎರಡೂ ಹೊತ್ತು ಪ್ರಸಾದ (ಊಟ) ವ್ಯವಸ್ಥೆಯನ್ನು ಮಾಡುತ್ತಾ ಬಂದಿರುವುದು 'ಯುಗದ ಪವಾಡ'ವಾಗಿದೆ. ದಾಸೋಹದಲ್ಲಿ ದೇವರನ್ನರಸುವ ಮಂಗಳದೃಷ್ಟಿ ಶ್ರೀಗಳವರದು.



ಜಾತ್ರೆಯ ಜಾನುವಾರುಗಳಿಂದ ಕಿಕ್ಕಿರಿದಿರುತ್ತದೆ. ದೂರದೂರುಗಳಿಂದ ರಾಸುಗಳನ್ನು ಮಾರಲು, ಕೊಳ್ಳಲು ಗ್ರಾಮೀಣ ರೈತ ಬಂಧುಗಳು ಬರುತ್ತಾರೆ. ಕೃಷಿಯ ಸಂಪತ್ತು ಎತ್ತು, ಹೋರಿಗಳು. ಎತ್ತುಗಳ, ಹೋರಿಗಳ ಸಾಲಂಕೃತ ಉತ್ಸವಗಳು, ಮೆರವಣಿಗೆಗಳು, ಪ್ರದರ್ಶನಗಳು ನಡೆಯುತ್ತವೆ.

ಜಾನುವಾರುಗಳಿಗೆ ಬಹುಮಾನ ನೀಡುವ ಪಶು ಪ್ರದರ್ಶನವಿರುತ್ತದೆ. ಶ್ರೀಗಳು ಸಾವಿರಾರಲ್ಲ, ಲಕ್ಷಾಂತರ ರೂ.ಗಳನ್ನು ಅದಕ್ಕಾಗಿ ನೀಡುತ್ತಾರೆ. ಅಲ್ಲದೆ ಜಾತ್ರೆಯ ವೇಳೆಯಲ್ಲಿ ಯಾವುದಾದರೂ ರಾಸುಗಳು ಮೃತಪಟ್ಟರೆ ವಿಮೆಯ ಸೌಲಭ್ಯ ಮಾಡುತ್ತಿದ್ದಾರೆ. ನೀರಿಗೆ, ನೆರಳಿಗೆ ವಿಶೇಷ ಸೌಲಭ್ಯವಿರುತ್ತದೆ. ರೈತರ ಹಣ ರಕ್ಷಣೆಗಾಗಿ ತಾತ್ಕಾಲಿಕ ಬ್ಯಾಂಕಿನ ವ್ಯವಸ್ಥೆಯೂ ಇಲ್ಲುಂಟು. ಜನಾರೋಗ್ಯ-ಪಶುವೈದ್ಯ ಸೌಲಭ್ಯವೂ ಇದೆ.

ಜಾತ್ರೆ ಕೇವಲ ಗದ್ದಲ ಗೋಜುಗಳ ಸಂತೆಯಾಗಬಾರದು. ಅದೂ ಕೂಡ ಶಿಕ್ಷಣಾಲಯವಾಗಬೇಕು. ಜನ ಸಾಮಾನ್ಯರ ತಿಳುವಳಿಕೆಯ ದಿಗಂತವನ್ನು ವಿಸ್ತರಿಸುವುದಾದರೆಷ್ಟು ಚೆಂದ ಎಂದು ಯೋಚಿಸಿದ ಶ್ರಿಗಳು ೧೯೬೪ ರಲ್ಲಿ ಶ್ರೀ ಸಿದ್ಧಗಂಗಾ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನವನ್ನು ಸಣ್ಣ ಪ್ರಮಾಣದಲ್ಲಿ ಪ್ರಾರಂಭಿಸಿದರು.

ಇಂದು ಈ ವಸ್ತುಪ್ರದರ್ಶನ ಸಿದ್ಧಗಂಗಾ ಜಾತ್ರೆಯ ಪ್ರಮುಖ ಆಕರ್ಷಣೆಯಾಗಿದೆ. ಈ ಪ್ರದರ್ಶನವು ಹಲವರು ವಿಷಯಗಳ ಬಗ್ಗೆ ಅರಿವು ಮೂಡಿಸುವ ಪ್ರಯೋಗಶಾಲೆ. ರೈತ ಬಾಂಧವರಿಗೆ, ಎಲ್ಲರಿಗೂ ದೃಶ್ಯ ಶ್ರವಣ ಮಾಧ್ಯಮದ ಮೂಲಕ ಜ್ಞಾನಾರ್ಜನಾ ಸೋಪಾನವಾಗಿದೆ.

ರೈತರ, ಗ್ರಾಮೀಣರ ಬಗ್ಗೆ ಅಪಾರ ಪ್ರೀತಿಯುಳ್ಳ ಪೂಜ್ಯ ಶ್ರೀಗಳವರ ದೂರದೃಷ್ಟಿಯ ಫಲವಾಗಿ ಆರಂಭವಾದ ಈ ವಸ್ತುಪ್ರದರ್ಶನ ಇಂದು ನಾಡಿನ ಪ್ರಸಿದ್ಧ ಬೃಹತ್ ಪ್ರದರ್ಶನಗಳಲ್ಲೊಂದಾಗಿದೆ. ಕೃಷಿ, ಆರಣ್ಯ, ರೇಷ್ಮೆ, ಕೈಮಗ್ಗ, ಮೀನುಗಾರಿಕೆ, ಪಶು ಸಂಗೋಪನೆ, ಆರೋಗ್ಯ, ಖಾದಿ ಗ್ರಾಮೋದ್ಯೋಗ, ಮಹಿಳಾ ಕಲ್ಯಾಣ, ತೋಟಗಾರಿಕೆ, ನೀರಾವರಿ, ಗ್ರಾಮಾಭಿವೃದ್ಧಿ, ಲೋಕೋಪಯೋಗಿ, ಶಿಕ್ಷಣ, ಬ್ಯಾಂಕಿಂಗ್, ಎಚ್.ಎಂ.ಟಿ. ಮುಂತಾದ ಕೇಂದ್ರ ಹಾಗೂ ರಾಜ್ಯ ಸರಕಾರದ ಮಳಿಗೆಗಳು, ಖಾಸಗಿ ಕೈಗಾರಿಕೋದ್ಯಮದ ಮಳಿಗೆಗಳು ಪ್ರದರ್ಶನಕ್ಕೆ ತೆರೆದುಕೊಂಡಿರುತ್ತವೆ.

ಇವುಗಳ ಜೊತೆಗೆ ಮಕ್ಕಳ ಮನರಂಜನೆಗಾಗಿ ಆಧುನಿಕ ಕ್ರೀಡಾ ಯಂತ್ರಗಳಾದ ತಿರುಗುಚಕ್ರ, ಏರುಚಕ್ರ, ಸುತ್ತುಚಕ್ರ ಆಕರ್ಷಿಸುತ್ತವೆ. ನೃತ್ಯ, ನಾಟಕ, ಕವಿಗೋಷ್ಠಿ, ಜನಪದ ಗೀತೆಗಳು, ಭಾವಗೀತೆಗಳು, ಕಥಾ ಕಾಲಕ್ಷೇಪಗಳಂಥ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆಂದೇ ಸುಸಜ್ಜಿತ ರಂಗಮಂದಿರ ಪ್ರತಿದಿನ ಸಂಜೆ ಕ್ರಿಯಾಶೀಲವಾಗಿರುತ್ತದೆ. ಈ ಎಲ್ಲ ವ್ಯವಸ್ಥೆಗಳ ಹಿಂದೆ ಶ್ರೀಮಠದ ಹಳೆಯ ವಿದ್ಯಾರ್ಥಿ ಸಂಘ ದುಡಿಯುತ್ತದೆ. ಶ್ರೀಕ್ಷೇತ್ರದ ಶಿಕ್ಷಕ ಮತ್ತು ಶಿಕ್ಷಕೇತರ ಸಿಬ್ಬಂದಿ ಹಾಗೂ ವಿದ್ಯಾರ್ಥಿ ಸಮುದಾಯ ಜಾತ್ರಾ ಸೇವೆಯಲ್ಲಿ ನಿರತರಾಗಿರುತ್ತಾರೆ.

ಶ್ರೀ ಸಿದ್ಧಗಂಗಾ ಜಾತ್ರೆ ಭಾರತೀಯ ಸಂಸ್ಕೃತಿಯನ್ನು ಪ್ರತಿನಿಧಿಸುತ್ತಿರುವ ಒಂದು ಅನೌಪಚಾರಿಕ ವಿಶ್ವವಿದ್ಯಾಲಯ. ಈ ವಿಶ್ವವಿದ್ಯಾಲಯದ ಕುಲಾಧಿಪತಿಗಳು ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಗಳಾದರೆ, ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳು ಕುಲಪತಿಗಳಾಗಿ ಬಸವಾದಿ ಶರಣರ ಸಂದೇಶವನ್ನು ಆಚರಣೆಗೆ ತರುವಲ್ಲಿ ಶರಣ ತತ್ತ್ವದ ಪ್ರಯೋಗ ಶಾಲೆಯನ್ನಾಗಿ ರೂಪಿಸುತ್ತ ಮುನ್ನಡೆದಿರುವುದು ಈ ಸಹಸ್ರಮಾನದ ಭಾಗ್ಯವಾಗಿದೆ.







ಸಾಂದರ್ಭಿಕ

# ಮಾನವ ನಿರ್ಮಾಣವೇ ಶಿಕ್ಷಣದ ಉದ್ದೇಶವಾಗಲಿ

– ಸ್ವಾಮಿ ವೀರೇಶಾನಂದ ಸರಸ್ವತೀ *



ಮಾನವನು 'ಮಾನವ ಸಂಪನ್ಮೂಲ'ವಾಗಿ ರೂಪುಗೊಳ್ಳುವ ಪ್ರಕ್ರಿಯೆ ಸಾಮಾನ್ಯವಾದುದಲ್ಲ. ಶಿಕ್ಷಣವು ಮಾತ್ರವೇ ಮಾಂಸಲ ಸ್ವರೂಪಕ್ಕೆ ಸೀಮಿತವಾಗಿದ್ದ ಜೀವಿಯ ವಿಕಾಸವನ್ನು ಮನೋಸಾಮಾಜಿಕ ವಿಕಾಸದ ಹಂತಕ್ಕೆ ಕೊಂಡೊಯ್ಯಬಲ್ಲದು ಎಂಬುದು ಅಧ್ಯಯನ ಯೋಗ ವಿಷಯವಾಗಿದೆ. ಮಾನವನ ಸಾಮರ್ಥ್ಯವು ಅಧಿಕ ಹಾಗೂ ಅಪರಿಮಿತವಾಗಿರುವುದರಿಂದ ಅವನಿಗೆ ಉನ್ನತ ಮಟ್ಟದ ತರಬೇತಿ ಅತ್ಯಗತ್ಯ.

ಮಾನವ ನಿರ್ಮಾಣ ಶಿಕ್ಷಣ ಕುರಿತು ಸ್ವಾಮಿ ವಿವೇಕಾನಂದರು ಒತ್ತಿ ಹೇಳಿದ್ದಾರೆ– 'ಶಿಕ್ಷಣ ಎಂಬುದು ಆದಾಗಲೇ ಮನುಷ್ಯನಲ್ಲಿ ಇರುವ ಪರಿಪೂರ್ಣತೆಗೆ ನೀಡಲಾಗುವ ಅಭಿವ್ಯಕ್ತತೆ', ಮಾನವನಲ್ಲಿ ಸುಪ್ತವಾಗಿರುವ ಶಕ್ತಿಗಳು ಜಾಗ್ರತಗೊಳ್ಳುವಂತೆ ಮಾಡುವ ಸಾಧನೆಯೇ ಶಿಕ್ಷಣ, ಅದೊಂದು ತಪಸ್ಸು.

ಪರೀಕ್ಷೆಯಲ್ಲಿ ಉತ್ತಮ ಅಂಕಗಳಿಕೆ ಹಾಗೂ ಹೆಚ್ಚಿನ ಹಣ ತರುವ ನೌಕರಿಯನ್ನು ಸಂಪಾದಿಸುವುದೇ ಇಂದಿನ ಶಿಕ್ಷಣದ ಧ್ಯೇಯವಾಗಿರುವುದು. ಇದೇ ನಮ್ಮ ಪ್ರಸ್ತುತ ಶೈಕ್ಷಣಿಕ ವ್ಯವಸ್ಥೆಯ ಎಲ್ಲ ಲೋಪದೋಷಗಳ ಮೂಲ ಕಾರಣ. ಇಂದಿನ ಅಮೆರಿಕನ್ ಶಿಕ್ಷಣದ ವ್ಯಾಖ್ಯೆಯನ್ನು ಅಮೆರಿಕನ್ ಪತ್ರಿಕೆಯೊಂದು (ನ್ಯಾಷನಲ್ ಪೇರೆಂಟ್–ಟೀಚರ್ ಜರ್ನಲ್) ಹೀಗೆ ಹೇಳಿದೆ : 'ಇಂದಿನ ಶಿಕ್ಷಣವೆಂದರೆ ಪ್ರಾಧ್ಯಾಪಕರ ಟಿಪ್ಪಣಿಗಳು ವಿದ್ಯಾರ್ಥಿಯ ಟಿಪ್ಪಣಿ ಪುಸ್ತಕಕ್ಕೆ ಅವನ ಲೇಖನಿಯ ಮೂಲಕ ಸ್ಥಳಾಂತರ ಹೊಂದುತ್ತವೆ. ಆದರೆ ಅವು ಅವರೀರ್ವರ ಮಿದುಳಿನಲ್ಲಿ ಸೇರುವುದಿಲ್ಲ', ಈ ವ್ಯಾಖ್ಯೆ ಇಂದಿನ ಭಾರತದ ಶಿಕ್ಷಣಕ್ಕೂ ಅನ್ವಯಿಸುತ್ತದೆ.

ಸ್ವಾಮಿ ವಿವೇಕಾನಂದರು ಹೇಳುತ್ತಾರೆ : 'ವಿದೇಶಿ ಭಾಷೆಯೊಂದರಲ್ಲಿರುವ ಇತರರ ಆಲೋಚನೆಗಳನ್ನು ಉರು ಹಚ್ಚಿ, ಅವುಗಳನ್ನು ನಿಮ್ಮ ಮಿದುಳಿನಲ್ಲಿ ಹಿಡಿದಿಟ್ಟುಕೊಂಡು, ವಿಶ್ವವಿದ್ಯಾನಿಲಯದ ಕೆಲವು ಪದವಿಗಳನ್ನು ಪಡೆದುಕೊಂಡು, ನಿಮ್ಮನ್ನು ನೀವೇ ಸುಶಿಕ್ಷಿತ ವ್ಯಕ್ತಿ ಎಂದು ಪರಿಗಣಿಸಿಕೊಂಡು ಬಿಡುತ್ತೀರಿ. ಇದು ಶಿಕ್ಷಣವೇ ? ನಿಮ್ಮ ಶಿಕ್ಷಣದ ಗುರಿಯಾದರೂ ಏನು ? ಗುಮಾಸ್ತನ ಹುದ್ದೆಯನ್ನು ಗಳಿಸುವುದು ಅಥವಾ ನ್ಯಾಯವಾದಿಯಾಗುವುದು ಅಥವಾ ತೀರ ಹೆಚ್ಚೆಂದರೆ ಉಪದಂಡಾಧಿಕಾರಿಯಾಗುವುದು–ಇದು ಇನ್ನೊಂದು ಬಗೆಯ ಗುಮಾಸ್ತಗಿರಿಯೇ ! – ಇಷ್ಟೇ ಏನು ? ಅದು ನಿಮಗಾಗಲೀ, ನಿಮ್ಮ ದೇಶಕ್ಕಾಗಲೀ ಏನು ಒಳಿತನ್ನು ಮಾಡಬಲ್ಲದು ? ನಿಮ್ಮ ಕಣ್ಣುಗಳನ್ನು ತೆರೆದು ನೋಡಿ; ಭರತ ವರ್ಷದಲ್ಲಿ ಆಹಾರಕ್ಕಾಗಿ ಎಂಥ ಕರುಣಾಜನಕ ಹಾಹಾಕಾರ ಕೇಳಿಬರುತ್ತಿದೆ ಎಂಬುದನ್ನು ಗಮನಿಸಿ – ಆಹಾರ ಸಮೃದ್ಧಿಗಾಗಿ ಹೆಸರಾಗಿದ್ದ ಈ ನಾಡಿನಲ್ಲಿ ಏನಾಗುತ್ತಿದೆ ಎಂಬುದನ್ನು ಗಮನಿಸಿ. ನಿಮ್ಮ ಶಿಕ್ಷಣ ಈ ಕೊರತೆಯನ್ನು ತುಂಬಿಕೊಡಬಲ್ಲದೆ ? ಬಾಳಿನ ಹೋರಾಟಕ್ಕಾಗಿ ಸಾಮಾನ್ಯ ಜನಸಮುದಾಯವನ್ನು ಸನ್ನದ್ಧಗೊಳಿಸಲು ನೆರವಾಗದಂಥ, ಚಾರಿತ್ರ್ಯದ ಬಲವನ್ನು ಹೊರಹೊಮ್ಮಿಸಲಾರದಂಥ ಶಿಕ್ಷಣ, ಶಿಕ್ಷಣವೆನಿಸಿಕೊಳ್ಳಲು ಅರ್ಹವಾಗುತ್ತದೆಯೇ ?'

ರಾಮಕೃಷ್ಣ ಮಿಷನ್ನಿನ ಅಧ್ಯಕ್ಷರಾಗಿದ್ದ ಪೂಜ್ಯ ಸ್ವಾಮಿ ರಂಗನಾಥಾನಂದಜೀಯವರು ಬ್ರಿಟಿಷ್ ಜೀವಶಾಸ್ತ್ರಜ್ಞ ಸರ್ ಜೂಲಿಯನ್ ಹಕ್ಸ್‌ಲೆರಿಗೆ ಬರೆದ ಪತ್ರದಲ್ಲಿ ಹೀಗೆ ಹೇಳುತ್ತಾರೆ : 'ಮೂಲತಃ ಈಗಿನ ಭಾರತೀಯ ಶಿಕ್ಷಣ ಬ್ರಿಟಿಷರು ಕಳೆದ ಶತಮಾನದಲ್ಲಿ, ಗುಮಾಸ್ತರುಗಳನ್ನು ಸೃಷ್ಟಿಸುವ ಉದ್ದೇಶದಿಂದ ಜಾರಿಗೆ ತಂದ ಶಿಕ್ಷಣದ ಮುಂದುವರಿಕೆ ಮಾತ್ರ. ಬ್ರಿಟಿಷರು ಈ ದೇಶವನ್ನು ಬಿಟ್ಟು ಹೋದ ಮೇಲೆ ಪ್ರಮಾಣದಲ್ಲಿ ಅದು ವಿಸ್ತಾರಗೊಂಡಿದೆ. ಆದರೆ ಗುಣಮಟ್ಟ ಕೆಳಗಿಳಿದಿದೆ. ಈ ಶಿಕ್ಷಣದಲ್ಲಿ ಪ್ರಾಚೀನ ಭಾರತೀಯ ಪದ್ಧತಿಯಲ್ಲಿನ ಒಳ್ಳೆಯ ಅಂಶಗಳೂ ಇಲ್ಲ, ಆಧುನಿಕ ಬ್ರಿಟಿಷ್ ಪದ್ಧತಿಯದ್ದೂ ಇಲ್ಲ; ಆದರೆ ಅವುಗಳಲ್ಲಿರುವ ದೌರ್ಬಲ್ಯಗಳು ಇವೆ ! ಪ್ರತಿ ವರ್ಷವೂ ಇದು ಹೊರ ಹಾಕುತ್ತಿರುವುದು ಮಾನವರನ್ನಲ್ಲ, ಸಮಾಜಕ್ಕೆ

* ಅಧ್ಯಕ್ಷರು, ರಾಮಕೃಷ್ಣ–ವಿವೇಕಾನಂದ ಆಶ್ರಮ, ತುಮಕೂರು





ಬೇಕಾದ ಕರ್ಮಿಗಳನ್ನು–ಅದೆಷ್ಟೋ ವಕೀಲರು, ವೈದ್ಯರು, ಇಂಜಿನೀಯರ್ ಮೊದಲಾದವರನ್ನು. ಆದರೆ ಭಾರತ ಕೂಡ ಶಿಕ್ಷಣ ರಂಗದಲ್ಲಿ ಮಹತ್ವದ ಪ್ರಯೋಗಗಳನ್ನು ಸದ್ದಿಲ್ಲದೆ ನಡೆಸುತ್ತಿದೆ ಹಾಗೂ ಈ ವಿಷಯದ ಬಗ್ಗೆ ನಿಶ್ಶಬ್ದವಾಗಿ ಬಹಳಷ್ಟು ರಚನಾತ್ಮಕ ಚಿಂತನೆ ಮತ್ತು ಚರ್ಚೆಗಳು ನಡೆಯುತ್ತಿವೆ.'



ಮಾನವನಿಗೆ ಶಿಕ್ಷಣವೆಂಬ ಸಂಸ್ಕಾರವು ಬದುಕನ್ನು ಸಾಂತದಿಂದ ಅನಂತತೆಯೆಡೆಗೆ ಸಾಗಲು ಅನುವು ಮಾಡಿಕೊಡುತ್ತದೆ. ಸ್ವಾಮಿ ವಿವೇಕಾನಂದರು ಹೇಳುವಂತೆ, 'ಶಿಕ್ಷಣ ಎಂಬುದು ನಿಮ್ಮ ತಲೆಯಲ್ಲಿ ತುಂಬ ಲಾಗಿರುವ ಮಾಹಿತಿಯ ಮೊತ್ತವಲ್ಲ; ಹಾಗೂ ಅದು ನಿಮ್ಮ ಬಾಳಿನ ಪರ್ಯಂತ ಅರಗದೆ ಮನಸ್ಸಿಯಾಗಿ ವರ್ತಿಸುವಂಥ ಸಂಗತಿಯೂ ಅಲ್ಲ. ಬಾಳನ್ನು, ವ್ಯಕ್ತಿಯನ್ನು, ಶೀಲವನ್ನು ರೂಪಿಸುವಂಥ ಆಲೋಚನೆಗಳ ಆತ್ಮೀಕರಣ ನಮ್ಮಲ್ಲಿ ಆಗಬೇಕು. ನೀವು ಐದು ಆಲೋಚನೆ ಗಳನ್ನು ಆತ್ಮೀಕರಿಸಿಕೊಂಡಿದ್ದರೆ ಹಾಗೂ ಅವುಗಳನ್ನು ನಿಮ್ಮ ಬಾಳಿನ ಮತ್ತು ಶೀಲದ ಅಭಿನ್ನ ಅಂಗವಾಗಿಸಿಕೊಂಡಿದ್ದರೆ, ಇಡೀ ಗ್ರಂಥಾಲಯಗಳೇ ನಮ್ಮ ಜಗತ್ತಿನ ಮಹಾಮುನಿಗಳಾಗಿ ಬಿಡುತ್ತಿದ್ದವು. ಹಾಗೂ ವಿಶ್ವಕೋಶಗಳೇ ಋಷಿ ಗಳಂತಾಗಿ ಬಿಡುತ್ತಿದ್ದವು'.

ಇಂದು ಆಧುನಿಕ ಜಗತ್ತಿನಲ್ಲಿ ನಮ್ಮ ಯುವ ಜನತೆಯ ಬದುಕು ಮೌಲ್ಯರಹಿತವಾಗುತ್ತಿದ್ದರೆ, ನರಕ ಸದೃಶವಾಗುತ್ತಿದ್ದರೆ ಇದು ಸಮಾಜದ ಮಾತಾಪಿತೃಗಳ, ಗುರುಹಿರಿಯರ ವೈಫಲ್ಯವನ್ನೇ ಎತ್ತಿ ತೋರಿಸುತ್ತದೆ. ತಮ್ಮ ಮಕ್ಕಳನ್ನು ಕೇವಲ ಅಕ್ಷರಸ್ಥರ ನ್ನಾಗಿ ಮತ್ತು ಹಣ ತರುವ ಯಂತ್ರಗಳಾಗಿಯೇ ಕಾಣ ಬಯಸುವ ಹಿರಿಯರಿಗೆ ಪ್ರಸಿದ್ಧ ವಿಜ್ಞಾನಿಯೊಬ್ಬ ಹೇಳುತ್ತಾನೆ: 'ವಿಜ್ಞಾನವು ಜೀವನವನ್ನು ದೀರ್ಘಗೊಳಿಸುತ್ತದೆ, ಧರ್ಮ ಅದನ್ನು ಆಳವಾಗಿಸುತ್ತದೆ'.

ಸ್ವಾಮಿ ವಿವೇಕಾನಂದರು ಹೇಳುತ್ತಾರೆ: 'ಎಲ್ಲ ಶಿಕ್ಷಣದ, ಎಲ್ಲ ತರಬೇತಿಯ ಗುರಿ ಮಾನವನನ್ನು ರೂಪಿಸುವುದೇ ಆಗಿರಬೇಕು. ಎಲ್ಲ ತರಬೇತಿಯ ಉದ್ದೇಶ ಮತ್ತು ಗುರಿ ಮನುಷ್ಯನನ್ನು ಬೆಳೆಯುವಂತೆ ಮಾಡುವುದೇ ಆಗಿರುತ್ತದೆ. ಇಚ್ಛೆಯ ಪ್ರವಾಹ ಮತ್ತು ಅಭಿವ್ಯಕ್ತಿಯನ್ನು ಯಾವ ತರಬೇತಿಯ ಮೂಲಕ ನಿಯಂತ್ರಿಸ ಲಾಗುತ್ತದೆಯೋ, ಫಲಪ್ರದವಾಗುಂತೆ ಮಾಡಲಾಗುತ್ತ ದೆಯೋ ಅದನ್ನು ಶಿಕ್ಷಣವೆಂದು ಕರೆಯಲಾಗುತ್ತದೆ. ಇಂದು ನಮ್ಮ ನಾಡಿಗೆ ಅಗತ್ಯವಾಗಿರುವುದು ಕಬ್ಬಿಣದ ಮಾಂಸಖಂಡಗಳು ಮತ್ತು ಉಕ್ಕಿನ ನರಗಳು, ಯಾವುದೂ ಎದುರಿಸಿ ನಿಲ್ಲಲಾಗದಂಥ ಮಹಾ ಸಂಕಲ್ಪಗಳು; ಈ ಸಂಕಲ್ಪಗಳು ವಿಶ್ವ ವೈಚಿತ್ರ್ಯಗಳನ್ನೂ ರಹಸ್ಯಗಳನ್ನೂ ಭೇದಿಸಬಲ್ಲಂಥವಾಗಿರಬೇಕು ಹಾಗೂ ಸಾಗರದ ತಳಕ್ಕೇ ಹೋಗಿ ಮೃತ್ಯುವನ್ನು ಮುಖಾಮುಖಿಯಾಗಿ ಎದುರಿಸುವಂಥ ವಿಚಾರವೇ ಆದರೂ, ಯಾವುದೇ ರೂಪದಲ್ಲಾದರೂ ತಮ್ಮ ಉದ್ದೇಶವನ್ನು

ಸಾಧಿಸಬಲ್ಲಂಥವಾಗಿರಬೇಕು. ನಮಗೆ ಬೇಕಾಗಿ ರುವುದು ಮಾನವನನ್ನು ರೂಪಿಸುವಂಥ ಧರ್ಮ. ನಮಗೆ ಬೇಕಾಗಿರುವುದು ಮಾನವನನ್ನು ರೂಪಿಸುವಂಥ ಸಿದ್ಧಾಂತ ಗಳು, ನಮಗೆ ಬೇಕಾಗಿರುವುದು ಸರ್ವತೋಮುಖವಾಗಿ ಮಾನವನ್ನು ರೂಪಿಸುವಂಥ ಶಿಕ್ಷಣ'.

ಸ್ವಾಮಿ ವಿವೇಕಾನಂದರು ಮಾನವನನ್ನು ರೂಪಿಸುವ ಶಿಕ್ಷಣ ಎಂದು ಕರೆದುದರ ಮೂಲ ಲಕ್ಷಣಗಳೆಂದರೆ ಬೌದ್ಧಿಕ ಶ್ರಮದೊಡನೆ ಶರೀರ ಕ್ರಮಕ್ಕೂ ಸಮಾನ ಪ್ರಾಶಸ್ತ್ಯ ನೀಡುವುದು. ಇದರಿಂದ ಬುದ್ಧಿವಂತ ಮತ್ತು ಸಾಮಾಜಿಕ ದಕ್ಷತೆಯುಳ್ಳ ವ್ಯಕ್ತಿಗಳನ್ನು ನಿರ್ಮಿಸುವುದು. ಕೇವಲ ಬೌದ್ಧಿಕ ಶಿಕ್ಷಣವು ಉನ್ನತ ಶಿಕ್ಷಣ ಮಟ್ಟದಲ್ಲಿ ಮಾತ್ರ ಉಪಯುಕ್ತವಾಗಬಹುದು.

ವಿಶ್ವವಿಖ್ಯಾತ ವಿಜ್ಞಾನಿ ಆಲ್ಬರ್ಟ್ ಐನ್‌ಸ್ಟೀನ್ ಹೇಳುತ್ತಾನೆ: 'ಶಿಕ್ಷಣವೆಂಬುದು ಮಾನವನಿಗೆ ಒಂದು ವಿಶೇಷತೆಯನ್ನು ತಿಳಿಯಪಡಿಸುವ ತರಬೇತಿಯಾಗ ಬಾರದು. ಅಂತಹ ಪ್ರಕ್ರಿಯೆಯಿಂದ ವ್ಯಕ್ತಿಯು ಒಂದು ಉಪಯುಕ್ತ ಉಪಕರಣವಾಗಬಲ್ಲನೇ ಹೊರತು ಅವನಲ್ಲಿ ವ್ಯಕ್ತಿತ್ವದ ಪರಿಪೂರ್ಣ ವಿಕಸನವಾಗಲಾರದು'.

ನಮ್ಮ ಶಿಕ್ಷಕರ ಮುಂದೆ ಗುರುತರ ಸವಾಲೊಂದನ್ನು ಗುರ್ತಿಸಬಹುದಾಗಿದೆ. ಶಿಕ್ಷಣವು ಚಾರಿತ್ರ್ಯವಂತರನ್ನು ನಿರ್ಮಿಸಬೇಕು ಮತ್ತು ಚಾರಿತ್ರ್ಯ ಶಕ್ತಿಯ ಮಹತ್ವವು ಮಕ್ಕಳಿಗೆ ಮನವರಿಕೆಯಾಗುವುದು ಶೀಲವಂತ ಶಿಕ್ಷಕನ ಒಡನಾಟದಿಂದ ಮಾತ್ರ. ಚಾರಿತ್ರ್ಯವಂತ ಸಮಾಜವನ್ನು ನಿರ್ಮಿಸುವ ಸಂಕಲ್ಪ ಹೊತ್ತ ಶಿಕ್ಷಕರು ಈ ಪವಿತ್ರ

ಕಾರ್ಯದಲ್ಲಿ ಯಶಸ್ವಿಯಾಗುವುದು ನಮ್ಮ ಚಾರಿತ್ರ್ಯ ಶಕ್ತಿಯ ಅಭಿವ್ಯಕ್ತತೆಯಿಂದ ಮಾತ್ರ.

**ಸ್ವಾಮಿ ವಿವೇಕಾನಂದರು ಹೇಳುವಂತೆ :** 'ಶಿಕ್ಷಣ ವೆಂದರೆ ಬೋಧನೆಯಲ್ಲ, ಸಂವಾದ. ಶಿಕ್ಷಣದಲ್ಲಿ ವ್ಯಕ್ತಿತ್ವವು ವಿದ್ಯಾರ್ಥಿಗಳ ವ್ಯಕ್ತಿತ್ವದೊಡನೆ ಸಂಯೋಗ ಹೊಂದುತ್ತದೆ. ಕೇವಲ ಬೋಧನೆಗೆ ಇಂದು ಶಿಕ್ಷಣ ಸೇವೆಯ ಅಗತ್ಯವಿಲ್ಲ. ಪುಸ್ತಕ, ಟಿಪ್ಪಣಿಗಳು, ರೇಡಿಯೋ, ಟೆಲಿವಿಷನ್ ಮತ್ತು ಧ್ವನಿಮುದ್ರಿಕೆಗಳ ಮುಖಾಂತರ ಬೋಧನೆ ಪಡೆಯ ಬಹುದು. ಬಹುಪಾಲಿನ ಬೋಧನವು ಇತ್ತೀಚೆಗೆ ಈ ಮಾಧ್ಯಮಗಳ ಮುಖಾಂತರವೇ ನಡೆಯುತ್ತದೆ. ಇಂಥ ಬೋಧನೆಯು ವಿಚಾರಗಳನ್ನು 'ಒಂದರಿಂದ ಇನ್ನೊಂದಕ್ಕೆ' ಒಯ್ದಂತೆ ಮಾತ್ರ ಆಗುತ್ತದೆ. ಶಿಕ್ಷಣವೆಂದರೆ ಕೇವಲ ಬೋಧನೆಯಲ್ಲ, ವಿಚಾರಗಳನ್ನು ಅಥವಾ ಮಾಹಿತಿಯನ್ನು ಒಬ್ಬ ವ್ಯಕ್ತಿಯಿಂದ ಇನ್ನೊಬ್ಬ ವ್ಯಕ್ತಿಗೆ ಅಥವಾ ಒಂದು ಯಂತ್ರದಿಂದ ಇನ್ನೊಬ್ಬ ವ್ಯಕ್ತಿಗೆ ಸಾಗಿಸುವುದು ಮಾತ್ರವಲ್ಲ, ಶಿಕ್ಷಣದಲ್ಲಿ ವ್ಯಕ್ತಿತ್ವದ ಶಕ್ತಿಯ ಪಾತ್ರವು ಇರುತ್ತದೆ. ಆ ಶಕ್ತಿಯ ಸಂಪರ್ಕ ಬಂದಾಗ ವಿಚಾರ ಮತ್ತು ಮಾಹಿತಿಗಳು ಜೀವಕಳೆ ಹೊಂದುತ್ತವೆ. ಅದ್ದರಿಂದ ಆಗ ನೀಡಲಾದ ಶಿಕ್ಷಣ ಕೇವಲ ನಿರ್ಜೀವ ಮಾಹಿತಿಯಲ್ಲ. ಒಂದು ಶಕ್ತಿ. ಒಂದು ಸ್ಫೂರ್ತಿ ಎನಿಸುತ್ತದೆ. ಅದು ಜೀವಂತ ಸ್ಫೂರ್ತಿಯುತ ಶಿಕ್ಷಕನಿಂದ ಮಾತ್ರ ಸಾಧ್ಯ. ಶಿಕ್ಷಣವೆಂದರೆ ಮಹತ್ವದ ಸಂವಾದ. ಅದು ಮನಸ್ಸುಗಳ ಸಂಯೋಗ'.

ಸ್ವಾಮಿ ವಿವೇಕಾನಂದರು ೧೯೦೦ರಲ್ಲಿ ನ್ಯೂಯಾರ್ಕ್‌ನಲ್ಲಿ 'ನನ್ನ ಗುರು' ಎಂಬ ವಿಷಯವನ್ನು ಕುರಿತು ಮಾಡಿದ ಭಾಷಣದಲ್ಲಿ ಇದನ್ನು ಉಲ್ಲೇಖಿಸಿದ್ದಾರೆ: 'ಕೊಡಬಹುದಾದುದನ್ನು ಸ್ವಲ್ಪವಾದರೂ ಉಳ್ಳವನೇ ಶಿಕ್ಷಕನಾಗಬಲ್ಲ. ಏಕೆಂದರೆ ಶಿಕ್ಷಣವೆಂದರೆ ಮಾತ ನಾಡುವುದಲ್ಲ, ತತ್ತ್ವಗಳನ್ನು ಹಸ್ತಾಂತರಗೊಳಿಸುವುದೂ ಅಲ್ಲ, ಅದೊಂದು ಸಂವಾದ. ನಾನು ನಿಮಗೊಂದು ಹೂವನ್ನು ಕೊಡುವಂತೆ, ಅಧ್ಯಾತ್ಮವನ್ನು ಕೊಡಬಹುದು. ಇದು ಅಕ್ಷರಶಃ ಸತ್ಯ. ಆದ್ದರಿಂದ ಮೊದಲು ಚಾರಿತ್ರ್ಯವನ್ನು ಬೆಳೆಸಿಕೊಳ್ಳಿರಿ. ಅದೇ ನಿಮ್ಮ ಶ್ರೇಷ್ಠ ಕರ್ತವ್ಯ. ನಿಮ್ಮಷ್ಟಕ್ಕೆ ನೀವೇ ಸತ್ಯವನ್ನು ತಿಳಿದುಕೊಳ್ಳಿರಿ. ಅಮೇಲೆ ಅದನ್ನು ಅನೇಕರಿಗೆ ತಿಳಿಸಬೇಕಾಗುತ್ತದೆ. ಅವರೇ ನಿಮ್ಮಲ್ಲಿಗೆ ಬರುತ್ತಾರೆ. ಇದು ನನ್ನ ಗುರುಗಳ ದೃಷ್ಟಿಕೋನವಾಗಿತ್ತು... ಏನು ಮಾತನಾಡಿದೆವೆಂಬುದಕ್ಕೆ ಮಹತ್ವವಿಲ್ಲ. ಭಾಷೆಗಂತೂ ಬೆಲೆಯೇ ಇಲ್ಲ. ಮಾತನಾಡುವವನ ವ್ಯಕ್ತಿತ್ವವೇ ಮಹತ್ವದ್ದು. ಅದೇ ಎಲ್ಲದರಲ್ಲಿಯೂ ವಾಸಿಸಿರುತ್ತದೆ ಎಂದು ಅವರು ಹೇಳುತ್ತಿದ್ದರು. ಇದರ ಅನುಭವ ನಮಗೆಲ್ಲರಿಗೂ ಎಂದಾದರೊಮ್ಮೆ ಬಂದಿರುತ್ತದೆ. ಉತ್ಕೃಷ್ಟ ಭಾಷಣಗಳನ್ನು, ಒಳ್ಳೆಯ ತರ್ಕಬದ್ಧವಾದ ಉಪದೇಶಗಳನ್ನು ನಾವು ಕೇಳಿರುತ್ತೇವೆ. ಆದರೆ ಮನೆಗೆ ಹೋದೊಡನೆ ಅದೆಲ್ಲವನ್ನೂ ಮರೆತುಬಿಡುತ್ತೇವೆ. ಕೆಲವು ಸಲ ಸುಲಭ ಭಾಷೆಯ ಕೆಲವೇ ಮಾತುಗಳನ್ನು ಕೇಳಿರುತ್ತೇವೆ. ಆದರೂ ಅವು ನಮ್ಮ ಜೀವನದಲ್ಲಿ ಪ್ರವೇಶಿಸಿ ನಮ್ಮ ಅಂಶಗಳೇ ಆಗಿ ಶಾಶ್ವತ ಪರಿಣಾಮಗಳನ್ನು ಉಂಟುಮಾಡುತ್ತವೆ. ಯಾವ ವ್ಯಕ್ತಿ ತನ್ನ ಮಾತುಗಳನ್ನು ತನ್ನ ವ್ಯಕ್ತಿತ್ವವನ್ನು ತುಂಬಬಲ್ಲನೋ ಅವನ ಮಾತುಗಳು ಪರಿಣಾಮಕಾರಿಯಾಗಬಲ್ಲವು, ಆದರೆ ಅವನಲ್ಲಿ ಅಂಥ ಪ್ರಭಾವಶಾಲಿ ವ್ಯಕ್ತಿತ್ವವಿರಬೇಕು. ಶಿಕ್ಷಣವೆಂದರೆ ಕೊಡಕೊಳ್ಳುವುದು. ಶಿಕ್ಷಕರು ಕೊಡುತ್ತಾನೆ, ಶಿಷ್ಯನು ಸ್ವೀಕರಿಸುತ್ತಾನೆ. ಆದರೆ ಶಿಕ್ಷಕನಾದವನ ಹತ್ತಿರ ಕೊಡುವಷ್ಟು ಇರಬೇಕು. ಶಿಷ್ಯನು ಅದನ್ನು ಸ್ವೀಕರಿಸಲು ಸಿದ್ಧನಿರಬೇಕು'.

ಸ್ವಾಮಿ ವಿವೇಕಾನಂದರ ಈ ಮಾತುಗಳಲ್ಲಿಯ ಸ್ಫೂರ್ತಿದಾಯಕ ಭಾವನೆಗಳತ್ತ ಇಂದಿನ ಭಾರತೀಯ ಶಿಕ್ಷಣವು ಗಮನಕೊಡಬೇಕು. ಭಾರತದಲ್ಲಿನ ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಶಿಕ್ಷಣವು ಮನಸ್ಸುಗಳ ಸಂಯೋಗ ವಾಗುವಂತೆ ಮತ್ತು ವ್ಯಕ್ತಿತ್ವದ ಬೆಳವಣಿಗೆಯಾಗುವಂತೆ ಪ್ರಯತ್ನಿಸಬೇಕು. ಶಿಕ್ಷಣ ವಿದ್ಯಾರ್ಥಿ-ಕೇಂದ್ರಿತವಾಗಿರಬೇಕೇ ಹೊರತು ಶಾಲಾ-ಕೇಂದ್ರಿತ ಅಥವಾ ಪುಸ್ತಕ-ಕೇಂದ್ರಿತ ಅಲ್ಲ.

(ಕೃಪೆ: ವಿಜಯವಾಣಿ)

ಶಿಕ್ಷಣವು ಚಾರಿತ್ರ್ಯವಂತರನ್ನು
ನಿರ್ಮಿಸಬೇಕು ಮತ್ತು ಚಾರಿತ್ರ
ಶಕ್ತಿಯ ಮಹತ್ವವು ಮಕ್ಕಳಿಗೆ
ಮನವರಿಕೆಯಾಗುವುದು
ಶೀಲವಂತ ಶಿಕ್ಷಕನ ಒಡನಾಟದಿಂದ
ಮಾತ್ರ. ಚಾರಿತ್ರ್ಯವಂತ
ಸಮಾಜವನ್ನು ನಿರ್ಮಿಸುವ
ಸಂಕಲ್ಪ ಹೊತ್ತ ಶಿಕ್ಷಕರು
ಈ ಪವಿತ್ರ ಕಾರ್ಯದಲ್ಲಿ
ಯಶಸ್ವಿಯಾಗುವುದು
ತಮ್ಮ ಚಾರಿತ್ರ್ಯ ಶಕ್ತಿಯ
ಅಭಿವ್ಯಕ್ತಿಯಿಂದ ಮಾತ್ರ.



ಸಾಂದರ್ಭಿಕ

# ಮಹಾಶಿವರಾತ್ರಿಯ ದಿವ್ಯಸಂದೇಶ

– ಯೋಗೀಶ್ ನಿರ್ವಿಕಲ್ಪ *

ಸಾಗರ ಮಂಥನದ ಸಂದರ್ಭದಲ್ಲಿ ಉದಯಿಸಿದ ಹಾಲಾಹಲವನ್ನು ಶಿವನು ಸೇವಿಸಿ ಲೋಕವನ್ನು ಸಂರಕ್ಷಿಸಿದ ಪುಣ್ಯದಿನ ಶಿವರಾತ್ರಿ. ಬೇಡರ ಕಣ್ಣಪ್ಪ ತನ್ನ ನಿರ್ಮಲ ಮನದಿಂದ ಶಿವನನ್ನು ಪೂಜಿಸಿ, ಶಿವನ ಕಾರುಣ್ಯ ಪಡೆದ ದಿನವೂ ಶಿವರಾತ್ರಿಯೆಂದು ಪೌರಾಣಿಕ ಐತಿಹ್ಯಗಳು ತಿಳಿಸುತ್ತದೆ. ಅಂದು ಶಿವನ ಧ್ಯಾನದಲ್ಲಿರುವವರಿಗೆ ಯಾವುದೇ ಕಷ್ಟ ಕಾರ್ಪಣ್ಯಗಳು ಬರುವುದಿಲ್ಲ ಎಂಬ ನಂಬಿಕೆ ಇದೆ.

ಹಾಲಾಹಲವನ್ನು ಸೇವಿಸಿಯೂ ಸಮಚಿತ್ತತೆಯನ್ನು ಕಾಪಾಡಿಕೊಂಡ ಶಿವ, ನಮ್ಮೆಲ್ಲರಿಗೂ ಒಂದು ದಿವ್ಯ ಸಂದೇಶವನ್ನು ನೀಡಿರುವುದನ್ನು ಕಾಣಬಹುದು. 'ಕಷ್ಟಕಾರ್ಪಣ್ಯಗಳು ಪ್ರತಿಯೊಬ್ಬರಿಗೂ ಬರುವಂತಹದ್ದು, ನಾವು ನಮ್ಮ ಬದುಕಿನಲ್ಲಿ ಬರುವ ಅವುಗಳೆಲ್ಲವನ್ನೂ ಎದುರಿಸುವುದರ ಮೂಲಕ ಸಮಚಿತ್ತತೆಯನ್ನು ಕಾಪಾಡಿ ಕೊಳ್ಳಬೇಕು' ಎಂಬ ಸಹಿಷ್ಣುತೆಯ ಸಂದೇಶ ಇದರಲ್ಲಿ ಅಡಗಿದೆ. ನಮ್ಮ ಅಂತರಂಗದ ಪರಿಶುದ್ಧ ಭಕ್ತಿಗೆ ಪರಮಾತ್ಮ ಒಲಿಯುತ್ತಾನೆಯೇ ವಿನಃ ಬಹಿರಂಗದ ಒಣ ಆಡಂಬರಕ್ಕಲ್ಲ! ಎಂಬ ಭಕ್ತಿಯ ನೈಜತೆಯ ತತ್ತ್ವ ಬೇಡರ ಕಣ್ಣಪ್ಪನ ದೃಷ್ಟಾಂತ ಸಾಕ್ಷೀಕರಿಸುತ್ತದೆ. ಪೌರಾಣಿಕ ಹಿನ್ನೆಲೆಯ ದೃಷ್ಟಾಂತಗಳಲ್ಲಿ ಅಡಗಿರುವ ತತ್ತ್ವಗಳನ್ನು ವೈಚಾರಿಕ ಹಿನ್ನೆಲೆಯ ದೃಷ್ಟಿಯಲ್ಲಿ ಅರ್ಥೈಸಿಕೊಳ್ಳಬೇಕಾದದ್ದು ಅತ್ಯಂತ ಮುಖ್ಯ.

**ಐತಿಹಾಸಿಕ ಮಹತ್ವ :**

ಜಗತ್ತಿನ ಮೊಟ್ಟಮೊದಲ ಪ್ರವಾದಿ, ಭಾರತೀಯ ಧಾರ್ಮಿಕ ಮತ್ತು ಆಧ್ಯಾತ್ಮಿಕ ಪರಂಪರೆಗಳಿಗೆ ಮಹತ್ವಪೂರ್ಣ ಕೊಡುಗೆ ನೀಡಿದ ಶ್ರೇಷ್ಠ ತಪಸ್ವಿಯೂ ಹಾಗೂ ಓಂಕಾರ ಮಂತ್ರದ ಅನ್ವೇಷಕರಾದ ಯೋಗಿರಾಜ ಶಿವ ಲೋಕದ ಕಲ್ಯಾಣಾರ್ಥ ಅಖಂಡ ತಪಸ್ಸನ್ನು ಆಚರಿಸಿದ ಪವಿತ್ರ ದಿನ ಶಿವರಾತ್ರಿಯಾಗಿದೆ. ಸತ್‌ಸಂಕಲ್ಪಗಳ ಕ್ರಿಯಾರೂಪಕ್ಕೆ ತಪಸ್ವಿಯ ಮನಸ್ಸು ವಿಷಯ ಮುಕ್ತಗೊಂಡಿರಬೇಕು ಮತ್ತು ಪರಮಾತ್ಮನ ನಿರಂತರ ಅನುಸಂಧಾನ ಅವರದ್ದು. ಪರಮಾತ್ಮನ ಹೃದಯಸ್ಥಾನದಲ್ಲಿ ಸ್ಥಾಯಿಯಾಗಿ ಉಳಿಯುವುದರ ದಿವ್ಯ ಸಂದೇಶ ಶಿವರಾತ್ರಿ ನಮಗೆ ತಿಳಿಸುತ್ತದೆ.

**ಬಸವಣ್ಣನವರ ದೃಷ್ಟಿಯಲ್ಲಿ ಶಿವ :**

ಜ್ಞಾನ ಬೆಳಕನ್ನು ಲೋಕಕ್ಕೆ ಹರಿಸಿದ ದಾರ್ಶನಿಕರಾದ ಗುರು ಬಸವಣ್ಣನವರು 'ಇಡೀ ಬ್ರಹ್ಮಾಂಡ ತತ್ತ್ವವೇ ಒಂದು ಅಗೋಚರವಾದ ಶಕ್ತಿಯ ನಿಯಮದಡಿ ಸಾಗುತ್ತಿದೆ. ಅದುವೇ ಪರಮಾತ್ಮ ತತ್ತ್ವ' ಎನ್ನುತ್ತಾರೆ. ಮನುಷ್ಯನಾಗಿ ಹುಟ್ಟಿದ ನಂತರ ಅದರ ಸಾರ್ಥಕತೆ ಅಡಗಿರುವುದೇ ಪರಮಾತ್ಮ ತತ್ತ್ವವನ್ನು ಅರಿಯುವುದರಲ್ಲಿ ಎನ್ನುವಂತಹ ಅರ್ಥಪೂರ್ಣ ಚಿಂತನೆ ಅವರದು.

**ಶಿವಚಿಂತೆ ಶಿವಜ್ಞಾನವಿಲ್ಲದ ಮನುಜರು**
**ಸಗಣಕ್ಕೆ ಸಾಸಿರಹುಳು ಹುಟ್ಟವೆ, ದೇವಾ ?**
**ಕಾಡಮೃಗ ವೊಂದಾಗಿರಲಾರವೆ, ದೇವಾ ?**
**ಊರಮೃಗ ವೊಂದಾಗಿರಲಾರವೆ, ದೇವಾ ?**
**ನಮ್ಮ ಶರಣರಿಲ್ಲದ ಊರು, ದೇಶ**
**ವನವಾಸ, ನರವಿಂಧ್ಯ ಕಾಣಿರಣ್ಣಾ !**

ಪಶುಪಕ್ಷಿ ಮತ್ತು ಪ್ರಾಣಿಗಳಂತೆ ಕೇವಲ ಆಹಾರ, ನಿದ್ರೆ ಮತ್ತು ಕಾಮಾದಿ ಬಯಕೆಗಳ ವ್ಯಸನದಲ್ಲಿಯೇ ಸಮಯವನ್ನು ಕಳೆಯುವುದೆಂದರೆ ಗುರು ಬಸವಣ್ಣನವರ ದೃಷ್ಟಿಯಲ್ಲಿ ಅದು ನಿರರ್ಥಕ ಎನಿಸಿಬಿಡುತ್ತದೆ. ಲೋಕದಲ್ಲಿ ಹುಟ್ಟಿದ ಬಳಿಕ ಶಿವ (ಪರಮಾತ್ಮ)ನ ಧ್ಯಾನ, ಶಿವ (ಪರಮಾತ್ಮ)ನ ಚಿಂತನೆ ಇಲ್ಲದಿದ್ದರೆ ಬದುಕಿನೊಳಗಿನ ಪರಮಸತ್ಯವನ್ನು ತಿಳಿಯಲು ಸಾಧ್ಯವೇ ಇಲ್ಲ ಎನ್ನುವ ಅವರು ಪರಮಾತ್ಮ ತತ್ತ್ವದ ಸಾಕ್ಷಾತ್ಕಾರಕ್ಕೆ ಭಕ್ತಿ ಎನ್ನುವುದು ಸೋಪಾನವಿದ್ದಂತೆ ಎನ್ನುತ್ತಾರೆ. ನಾವು ಆಚರಿಸುವ ಭಕ್ತಿಯ ವಿಧಿ ವಿಧಾನಗಳು ವೈಚಾರಿಕಪೂರ್ಣವಾಗಿರಬೇಕೆಂಬ ಸಂದೇಶ ಅವರದು.

ಶಿವನನ್ನು ಕುರಿತ ನಮ್ಮ ಭಕ್ತಿಯಲ್ಲಿ ಅನನ್ಯವಾದ ಪ್ರೀತಿ, ನಂಬಿಕೆ ಮತ್ತು ವಿಶ್ವಾಸಗಳಿಲ್ಲದಿದ್ದರೆ ಅದು ನಿಜಭಕ್ತಿ ಎನಿಸಿಕೊಳ್ಳಲು ಸಾಧ್ಯವಿಲ್ಲ ಎಂಬುದು ಬಸವಣ್ಣನವರ ವಚನ ಸಂದೇಶದ ಸ್ಪಷ್ಟೋಕ್ತಿ. 'ಹರಿವ ನದಿಯ ತೆರನ ಹೋಲಬಲ್ಲಡೆ ಅದು ಭಕ್ತಿ' ಎಂಬುದು ಗುರು ಬಸವಣ್ಣನವರ ದೃಷ್ಟಿಯಲ್ಲಿ ಭಕ್ತಿ ಕುರಿತ ವೈಚಾರಿಕ ವಿಶ್ಲೇಷಣೆಯಾಗಿದೆ. ಹರಿವ ನದಿ ಯಾವ ರೀತಿ ಕಶ್ಮಲಗಳನ್ನು ತೊಳೆದು, ಶುದ್ಧೀಕರಿಸುವುದರ ಮೂಲಕ ಸಮುದ್ರ ಸೇರುವುದತ್ತ ತನ್ನ

* ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ-೫೭೭ ೨೦೧. ಮೊ: ೯೯೦೦೮ ೦೧೯೮೭

ಗುರಿ ಗಮ್ಯತೆಗಳನ್ನು ಕೇಂದ್ರೀಕರಿಸುತ್ತದೆ. ಅದೇ ರೀತಿ ನಾವು ಮಾಡುವ ಭಕ್ತಿ, ನಮ್ಮ ಮನಬುದ್ಧಿಗಳ ಅಜ್ಞಾನಗಳನ್ನು ಹೋಗಲಾಡಿಸಬೇಕು. ಪರಮಾತ್ಮನ ಪರಮಾನಂದದ ಅನುಭಾವದ ಸನಿಹ ಕರೆದೊಯ್ಯಬೇಕು. ಪರಿಪೂರ್ಣ ಶರಣಾಗತಿಯ ಶ್ರದ್ಧಾ ಭಕ್ತಿಯಿಂದ ನಾವು ಜ್ಞಾನದ ಸನಿಹ ಸಾಗಬಹುದೆಂಬ ತಾತ್ವಿಕ ಚಿಂತನೆ ಅವರದು.

**ಪಾತಕ ಶತಕೋಟಿಯನೊರಸಲು**
**ಸಾಲದೆ ಒಂದು ಶಿವನ ನಾಮ ?**
**ಸಾಲದೆ ಒಂದು ಹರನ ನಾಮ ?**
**ಕೂಡಲಸಂಗಮ ದೇವಾ**
**ನಿಮ್ಮ ಉಂಡಿಗೆಯ ಪಶುವ ಮಾಡಿದೆಯಾಗಿ.**

ಬದುಕಿನಲ್ಲಿ ನಾವು ಯಾವುದೆಲ್ಲಾ ತಪ್ಪು ಅಥವಾ ಪಾಪ ಕರ್ಮಗಳನ್ನು ಮಾಡಿದರೂ ಸಹ ಅವುಗಳಿಗೆ ಪರಿಹಾರ ನೀಡುವ ಶಕ್ತಿ ಶಿವನ ನಾಮಸ್ಮರಣೆಯಲ್ಲಿ ಅಡಗಿದೆ. ಪಾತಕ ಶತಕೋಟಿಯಿದ್ದರೂ ಚಿಂತೆಯಿಲ್ಲ. ಅವುಗಳೆಲ್ಲವನ್ನೂ ಶಿವನಿಗೆ ನಿವೇದಿಸಿಕೊಳ್ಳುವುದರ ಮೂಲಕ ಪಶ್ಚಾತ್ತಾಪ ಪಡಬೇಕು. ಮಾಡಿದ ತಪ್ಪನ್ನು ಪುನಃ ಮಾಡದೇ ಚಿತ್ತಶುದ್ಧಿಯಿಂದ ಶಿವನನ್ನು ಅನುಸಂಧಾನಿಸಿದರೆ ಮಾಡಿದ ತಪ್ಪಿಗೆ ಕ್ಷಮೆ ಸಿಗುತ್ತದೆ ಎಂಬ ಅಭಿಪ್ರಾಯ ಬಸವಾದಿ ಶರಣರದು.

**ಆವ ಯೋಗ ನಡೆಸಿದಡೇನು ?**
**ಆವ ಪೂಜೆಯ ರಚಿಸಿದಡೇನು ?**
**ದುರ್ಗುಣ ಬಿಟ್ಟಲ್ಲದೆ ಲಿಂಗ ಸಾಧ್ಯವಾಗದು**
**ಆಡಿದ ನುಡಿ ಹುಸಿಯೆಂದಡೆ**
**ಕೂಡಲಸಂಗಮದೇವ**
**ದೂರ ದೂರ ಕಾಣಾ.**

ಶಿವನನ್ನು ಕುರಿತ ಭಕ್ತಿ ಅಥವಾ ಜ್ಞಾನದ ಪ್ರಾಪ್ತಿಗೆ ನೂರಾರು ರೀತಿಯ ಯೋಗ ಆಚರಣೆಗಳನ್ನು ನಾವು ಮಾಡಬಹುದು. ಶಿವನನ್ನು ಒಲಿಸಿಕೊಳ್ಳಲು ನೂರಾರು ಪೂಜೆಯ ವಿಧಿವಿಧಾನಗಳನ್ನು ಆಡಂಬರ ಪೂರ್ಣವಾಗಿ ಆಚರಿಸಬಹುದು. ಈ ಎಲ್ಲಾ ಆಚರಣೆಗಳಿಂದ ಶಿವನನ್ನು ಸಂಪ್ರೀತಗೊಳ್ಳಲು ಸಾಧ್ಯವೇ ? ಎಂಬ ಪ್ರಶ್ನೆಯ ಮೂಲಕ ಆತ್ಮಾವಲೋಕನ ಮಾಡಿಕೊಳ್ಳಲು ತಿಳಿಸುವ ಬಸವಣ್ಣನವರು ನಿಜಕ್ಕೂ ಪರಮಾತ್ಮ ನಮ್ಮಿಂದ ಬಯುಸುವುದು ನಿರ್ಮಲವಾದ ಭಕ್ತಿ ಮತ್ತು ಮನಸ್ಸಿನ ಶುದ್ಧಾಂತಕರಣವನ್ನು ಮಾತ್ರ ಎಂಬುದನ್ನು ನಾವೆಂದಿಗೂ ಮರೆಯಬಾರದೆಂದು ತಿಳಿಸುತ್ತಾರೆ. ಯಾವುದೆಲ್ಲಾ ಯೋಗಸೂತ್ರದ ತಂತ್ರಗಳನ್ನು ಅರಿತು, ಆಚರಿಸಿದರೂ ಅವುಗಳ ಪ್ರತಿಫಲವಾಗಿ ಮನಸ್ಸು ಶುದ್ಧವಾಗದಿದ್ದರೆ ನಿಜಕ್ಕೂ ಅವುಗಳೆಲ್ಲವೂ ಅರ್ಥಹೀನ ಎನಿಸಿಬಿಡುತ್ತದೆ. ನಮ್ಮ ಪೂಜೆ, ಧ್ಯಾನ ಮತ್ತು ತಪಗಳೆಲ್ಲವುದರ ಪರಿಣಾಮ ಮನಸ್ಸು ನಿರ್ಮಲಗೊಳ್ಳಬೇಕು. ಪರಮಾತ್ಮನನ್ನು ತಿಳಿಯುವುದಕ್ಕೆ ಅದು ಸಕಾರಣವಾಗಬೇಕು.



ತನ್ನೊಳಗೇ ಇರುವ ಸುಗಂಧ ದ್ರವ್ಯವನ್ನು ಕಸ್ತೂರಿ ಮೃಗ ಅದನ್ನು ಹೊರಗೆ ಹುಡುಕಿದ ಪರಿಯಂತೆ ! ನಾವೂ ಸಹ ನಮ್ಮ ಅಂತರಂಗದಲ್ಲಿಯೇ ಇರುವ ಶಿವನನ್ನು ಒಳಗೆ ಹುಡುಕುವ ಪ್ರಯತ್ನವನ್ನೇ ಮಾಡುವುದಿಲ್ಲ. ಭಕ್ತಿ ಎನ್ನುವುದು ಮನದ ಅಂತರ್ಯಾಮಿಯಾದ ಪರಮಾತ್ಮನನ್ನು ಅನ್ವೇಷಿಸಲು ಪ್ರೇರಣಾ ಶಕ್ತಿಯಾಗಬೇಕು. ಆ ಪ್ರೇರಣಾ ಶಕ್ತಿಯೇ ನಿಜಾರ್ಥದಲ್ಲಿ ಭಕ್ತಿ ಎನಿಸಿಕೊಳ್ಳುತ್ತದೆ. ಅಮೂಲ್ಯನು, ಅಪ್ರಮಾಣನು ಮತ್ತು ಅಗೋಚರನಾದ ಪರಮಾತ್ಮ ಎಲ್ಲಿದ್ದಾನೆ ಎನ್ನುವಂತಹ ತಾತ್ತ್ವಿಕ ಚಿಂತನೆಯ ಒಂದು ಸಂದರ್ಭದಲ್ಲಿ ಬಸವಣ್ಣನವರು 'ಅಮೂಲ್ಯವಾದ ಪರಮಾತ್ಮ ತತ್ತ್ವ ಎಲ್ಲಿ ಅಡಗಿದೆ ಎಂದರೆ ಶರಣ ಭಕ್ತನ ಮನದ ಕೊನೆಯ ಮೊನೆಯಲ್ಲಿ' ಎಂದು ಅರ್ಥೈಸುತ್ತಾರೆ. ಅಂದರೆ ಮನ-ಬುದ್ಧಿ-ಅಹಂಕಾರಗಳಿಗೆ ಅಧಿಷ್ಠಾನವಾಗಿರುವ ತತ್ತ್ವವೇ ಪರಮಾತ್ಮ ತತ್ತ್ವ. ಭಕ್ತಿ ಮತ್ತು ಜ್ಞಾನದ ಮೂಲಕ ಮನಸ್ಸು ಯಾವ ಕ್ಷಣದಲ್ಲಿ ವೃತ್ತಿ ಪ್ರಪಂಚದಿಂದ ಹೊರಬರುತ್ತದೆಯೋ ಆಗ ಕಾಣುವುದೇ ನಿರ್ಗುಣ ನಿರಾಕಾರನಾದ ಶಿವನ ತತ್ತ್ವವಾಗಿದೆ. ಮನ-ಬುದ್ಧಿ-ಅಹಂಕಾರಗಳನ್ನು ದಾಟಿ ಅಂದರೆ ಪಂಚಕೋಶಗಳಾದ ಅನ್ನಮಯ, ಪ್ರಾಣಮಯ, ಮನೋಮಯ, ಬುದ್ಧಿಮಯ ಮತ್ತು ಆನಂದಮಯಗಳನ್ನು ದಾಟಿದ ನಿಲುವಿನಲ್ಲಿ (Transcendent) ಪರಮಾತ್ಮ ತತ್ತ್ವವನ್ನು ಅನುಭಾವಿಸಬಹುದು ಎನ್ನುವಂತಹ ಆಧ್ಯಾತ್ಮಪೂರ್ಣ ತತ್ತ್ವ ಸಂದೇಶ ಬಸವಣ್ಣನವರದು.

ನಿರ್ಮಲ ಮನಸ್ಸಿನ ಪ್ರತೀಕವೇ ಶರಣ ಭಕ್ತನಾಗಿರುವ ಕಾರಣ ದಯಾಮಯನಾದ ಶಿವ ಆ ಭಕ್ತನ ಮನಸ್ಸಿನಲ್ಲಿರುತ್ತಾನೆ ಎನ್ನುವಂತಹ ಅರ್ಥಪೂರ್ಣ ಚಿಂತನೆಯ ಸಂದೇಶ ಬಸವಣ್ಣನವರು ಉಪದೇಶಿಸಿದ ದರ್ಶನ ಶಾಸ್ತ್ರದಲ್ಲಿ ನಾವು ಕಾಣಬಹುದಾಗಿದೆ. ಅಂತಹ ಶಿವ ತತ್ತ್ವದ ಜ್ಞಾನ ಬೆಳಕಿನತ್ತ ಕರೆದೊಯ್ಯಲು ಶಿವರಾತ್ರಿಯ ಆಚರಣೆ ಸಕಾರಣವಾಗಬೇಕು. ಅದುವೇ ನಿಜಾರ್ಥದಲ್ಲಿ ಶಿವರಾತ್ರಿ ಎನಿಸಿಕೊಳ್ಳುತ್ತದೆ ಎನ್ನುವಂತಹ ತತ್ತ್ವ ಚಿಂತನೆ ಬಸವಣ್ಣನವರದು.



## ಸ್ಮರಣೆ

# ಕನ್ನಡ ನಾಡು ನುಡಿಯ ಬಗ್ಗೆ ಅಭಿಮಾನ ಮೂಡಿಸಿದ ಭಾಲ್ಕಿಯ ಪೂಜ್ಯ ಡಾ. ಶ್ರೀ ಶ್ರೀ ಚೆನ್ನಬಸವ ಪಟ್ಟದ್ದೇವರು

- ಎಚ್.ಎಸ್. ಸಿದ್ಧಗಂಗಪ್ಪ *



ಉತ್ತರ ಕರ್ನಾಟಕ ಭಾಗದಲ್ಲಿರುವ ಪ್ರಸಿದ್ಧ ವೀರಶೈವ ಲಿಂಗಾಯತ ಮಠಗಳಲ್ಲಿ ಬೀದರ ಜಿಲ್ಲೆಯ ಭಾಲ್ಕಿ ಮಠವೂ ಒಂದಾಗಿದ್ದು ನಾಡಿನ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ವಿಶಿಷ್ಟ ಸೇವೆಯನ್ನು ಸಲ್ಲಿಸುತ್ತಾ ಬಂದಿದೆ. ಸಾಮಾಜಿಕ-ಧಾರ್ಮಿಕ ಚಳುವಳಿಯ ಮೂಲಕ ವಿಶ್ವಕ್ಕೆ ಅರಿವಿನ ಜ್ಯೋತಿಯನ್ನು ಬೆಳಗಿಸಿದ ಮಹಾಜ್ಯೋತಿ ಬಸವಣ್ಣನವರ ಕರ್ಮಭೂಮಿಯಲ್ಲಿ ಅರಳಿರುವವರು ಶ್ರೀ ಭಾಲ್ಕಿ ಮಠದ ಪೀಠಾಧ್ಯಕ್ಷರಾಗಿದ್ದ ಪರಮಪೂಜ್ಯ ಡಾ. ಶ್ರೀ ಶ್ರೀ ಚನ್ನಬಸವ ಪಟ್ಟದ್ದೇವರು ಹಿಂದುಳಿದ ಪ್ರದೇಶಗಳಲ್ಲಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವುದರ ಮೂಲಕ ಆ ಭಾಗದ ಜನರಿಗೆ ಅಕ್ಷರ-ಅರವಿನ ಜ್ಯೋತಿಯನ್ನು ಬೆಳಗಿಸಿ ಸ್ವಾಭಿಮಾನದಿಂದ ಬದುಕುವಂತೆ ಮಾಡಿದ ಮಹಾಸಂತರು. ಅಸ್ಪೃಶ್ಯರೆಂದು ಕಡೆಗಣಿಸಿದ್ದ ಸಮಾಜದಲ್ಲಿ ಅವರಿಗೆ ಲಿಂಗ ದೀಕ್ಷೆಯನ್ನು ನೀಡಿ ಎಲ್ಲರಂತೆ ತಲೆ ಎತ್ತಿ ನಡೆಯುವಂತೆ ಮಾಡಿದ ಮಹಾನುಭಾವರು. ಅನಾಥವಾಗಿದ್ದ ಕಲ್ಲನ್ನು ಕಡೆದು ಮೂರ್ತಿಯನ್ನಾಗಿ ಮಾಡಿದ ಮಹಾಮಹಿಮರು. ಅವರ ವೈಚಾರಿಕತೆಯ ಪ್ರಖರತೆಯಿಂದ ನೂರಾರು ಜನ ಸ್ವಾಭಿಮಾನದಿಂದ ಸಮಾಜ ಮುಖಿಯಾಗಲು ಸಾಧ್ಯವಾಯಿತು. ಹನ್ನೆರಡನೆ ಶತಮಾನದಲ್ಲಿ ಬಸವಾದಿ ಶರಣರು ನೀಡಿದ ಸಂದೇಶವನ್ನು ಜೀವನದಲ್ಲಿ ಅಳವಡಿಸಿಕೊಂಡು, ನಡೆ-ನುಡಿಗಳಲ್ಲಿ ಒಂದಾಗಿ ಸಾರ್ಥಕ ಜೀವನ ನಡೆಸಿದರು. ಬಸವಣ್ಣನವರು ನುಡಿದು ನಡೆದಂತೆ 'ಇವನಾರವ ಇವನಾರವ ಎನ್ನದೆ ಇವ ನಮ್ಮವ ಇವ ನಮ್ಮವ'ನೆಂದು ಸಮಾಜದಲ್ಲಿರುವ ಎಲ್ಲರನ್ನೂ ಭೇದಭಾವವಿಲ್ಲದೆ ಅಪ್ಪಿಕೊಂಡ ಮಹಾಶರಣರು. ಈ ಪುಟ್ಟ ಲೇಖನದಲ್ಲಿ ಪೂಜ್ಯರ ಜೀವನ ಗಾಥೆಯನ್ನು ಕಟ್ಟಿಕೊಡುವುದು ಅಸಾಧ್ಯ ಎಂಬ ಅರಿವೂ ನನಗಿದೆ.

**ಜನನ-ಶಿಕ್ಷಣ :** ಬೀದರ್ ಜಿಲ್ಲೆಯ ಔರಾದ್ ತಾಲ್ಲೂಕಿನ ಕಮಲಾನಗರದಲ್ಲಿ ಫೆಬ್ರವರಿ ೨೨, ೧೮೯೦ ರಲ್ಲಿ ಜನಿಸಿದರು. ಹಡೆದ ಪುಣ್ಯಜೀವಿಗಳು ತಂದೆ ಶರಣ ರಾಚಪ್ಪ ಬುಳ್ಳಾ, ತಾಯಿ ಶರಣೆ ಸಂಗಮ. ಅವರದು ಸುಸಂಸ್ಕೃತ ಕುಟುಂಬ. ಮಗುವಿಗೆ ತಂದೆ ತಾಯಿಗಳು ಪ್ರೀತಿಯಿಂದ ಇಟ್ಟ ಹೆಸರು 'ಮಹಾರುದ್ರ'. ಬಾಲ್ಯದಿಂದಲೇ ರುದ್ರನ ಗುಣಗಳನ್ನು ಮೈಗೂಡಿಸಿಕೊಂಡರು, ತಾಯಿ ಜೋಳ ಬೀಸುವಾಗ, ತೊಡೆಯ ಮೇಲೆ ಮಲಗಿಸಿಕೊಂಡು ಶರಣರನ್ನು ಕುರಿತ ಹಾಡುಗಳನ್ನು ಹಾಡುವಾಗ ಬಾಲಕ ಮಹಾರುದ್ರನ ಮೇಲೆ ಗಾಢವಾದ ಪ್ರಭಾವ ಬೀರಿದವು. ಮಗನ ಭವಿಷ್ಯವನ್ನು ರೂಪಿಸುವಲ್ಲಿ ಕನಸನ್ನು ಕಟ್ಟಿಕೊಂಡಿದ್ದ ತಂದೆ ತಾಯಿಗಳ ಮೇಲೆ ವಿಧಿಯ ಕರಿನೆರಳು ಬಿದ್ದಿತು. ಮಹಾರುದ್ರ ಐದು ವರ್ಷದ ಬಾಲಕನಾಗಿದ್ದಾಗಲೇ ತಂದೆ-ತಾಯಿ ವಿಧಿವಶರಾದರು. ತಂದೆ ತಾಯಿಯರನ್ನು ಕಳೆದುಕೊಂಡು ಬಾಲಕ ಅನಾಥನಾದ. ಈ ಅನಾಥ ಪ್ರಜ್ಞೆ ಬಾಲಕನ ಮನಸ್ಸನ್ನು ಘಾಸಿಪಡಿಸಿತು. ಈ ನೋವು ಮುಂದೆ ಸಾವಿರಾರು ಅನಾಥ ಮಕ್ಕಳಿಗೆ ಬೆಳಕು ನೀಡುವಂತಾಯಿತು. ಆಗ ನೆರವಿಗೆ ಬಂದು ಆಶ್ರಯ ನೀಡಿದವರು ಕಮಲಾನಗರ ಶಾಖಾಮಠದ ಶ್ರೀ ಶಂಕರಯ್ಯ ದೇಶಿಕರು. ಅವರ ಆರೈಕೆ, ಹಾರೈಕೆಗಳಲ್ಲಿ ಮಹಾರುದ್ರ ಅವರು ಬದುಕಿನಲ್ಲಿ ಭರವಸೆಯನ್ನು

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೬೫೮೭೧







ಕಂಡರು. ಆಧ್ಯಾತ್ಮಿಕತೆ ಕಡೆ ಮನಸ್ಸುವಾಲಿತು. ಶ್ರೀ ಶಂಕರಯ್ಯ ದೇಶಿಕರು ಹಾಗೂ ಭಾಲ್ಕಿಯ ಶ್ರೀ ಸಿದ್ಧಬಸವ ಸ್ವಾಮಿಗಳವರ ಸೇವೆ ಮಾಡುವ ಮೂಲಕ ಮುಂದಿನ ಗುರಿಯನ್ನು ಕಂಡುಕೊಂಡರು. ಹಾನಗಲ್ಲ ಪೂಜ್ಯ ಶ್ರೀ ಕುಮಾರ ಸ್ವಾಮಿಯವರ ಆಶ್ರಯದಲ್ಲಿ ಶಿಕ್ಷಣ ಪಡೆಯುವ ಸುಯೋಗದಿಂದ ಆಧ್ಯಾತ್ಮಿಕತೆಯ ಒಂದು ಸುಂದರ ಪುಷ್ಪವಾಗಿ ಅರಳಿದರು. ಅವರ ನಡೆ-ನುಡಿಗಳಿಂದ ಭವಿಷ್ಯದ ಹಾದಿ ನಿಶ್ಚಲವಾಯಿತು. ಪೂಜ್ಯ ಶ್ರೀ ಕುಮಾರ ಸ್ವಾಮಿಗಳಿಗೆ ಆಧ್ಯಾತ್ಮಿಕತೆಯ ಒಂದು ಫಲಭರಿತ ಹಣ್ಣಾಗಿ ಕಂಡರು.

ಶ್ರೀ ಮಹಾರುದ್ರರು ಎಂಟು ವರ್ಷದವರಿದ್ದಾಗ ಭಾಲ್ಕಿಯ ಪೂಜ್ಯ ಶ್ರೀ ಸಿದ್ಧಬಸವ ಸ್ವಾಮಿಗಳು 'ಚೆನ್ನಬಸವ' ಎಂದು ಮರುನಾಮಕರಣ ಮಾಡಿ ಚೆನ್ನಬಸವಣ್ಣನವರಂತೆ ಜ್ಞಾನಿಯಾಗು ಎಂದು ಆಶೀರ್ವದಿಸಿ ಆಯ್ಯಾಚಾರ ದೀಕ್ಷೆ ಕೊಟ್ಟರು. ಔರಾದದ ಅಮರೇಶ್ವರ ಗುಡಿಯಲ್ಲಿದ್ದ ಕೇದಾರದಗಳಂಗಳಪ್ಪ ಕನ್ನಡ ಶಾಲೆಯಲ್ಲಿ ಕನ್ನಡವನ್ನು ಜೊತೆಯಲ್ಲಿ ಮರಾಠಿಯನ್ನು ಕಲಿತರು. ಬಾಲ್ಯದಲ್ಲಿಯೇ ಅವರನ್ನು ಜ್ಞಾನದ ಹಸಿವು ಕಾಡತೊಡಗಿತು. ಆ ಹಸಿವನ್ನು ತಣಿಸುವುದಕ್ಕಾಗಿ ಶಬರಿಶಂಕರ ವಿಳಾಸ, ರಾಜಶೇಖರ ವಿಳಾಸ, ವೃಷಬೇಂದ್ರ ವಿಜಯ, ಕರ್ನಾಟಕ ಶಬ್ದಮಂಜರಿ ಮೊದಲಾದ ಕಾವ್ಯಗಳನ್ನು ಅಧ್ಯಯನ ಮಾಡಿ ತಮ್ಮ ಅರಿವಿನ ದಿಗಂತವನ್ನು ವಿಸ್ತರಿಸಿಕೊಂಡರು. ಹೊಟ್ಟೆಯ ಹಸಿವಿಗಿಂತ ಜ್ಞಾನದ ಹಸಿವು ಹಲವಾರು ಗ್ರಂಥಗಳನ್ನು ಅಭ್ಯಾಸ ಮಾಡಲು ಪ್ರೇರಣೆ ನೀಡಿತು. ಹದಿನಾರು ವರುಷದವರಾದಾಗ ಶ್ರೀ ಶಿವಲಿಂಗೇಶ್ವರ ಸ್ವಾಮಿಗಳು ಪ್ರಸಾದ ದೀಕ್ಷೆ ನೀಡಿದರು. ಸಂಸ್ಕೃತವನ್ನು ಕಲಿತು, ಸಂಸ್ಕೃತ ಗ್ರಂಥಗಳನ್ನು, ಬಸವಾದಿ ಶರಣರ ವಚನಗಳನ್ನು ಅಧ್ಯಯನ ಮಾಡಿ ಅವುಗಳಲ್ಲಿನ ಸಂದೇಶವನ್ನು ಅರ್ಥ ಮಾಡಿಕೊಂಡು ಜೀವನದಲ್ಲಿ ಅಳವಡಿಸಿಕೊಂಡರು. ಇದರಿಂದ ಅವರಲ್ಲಿ ವೈಚಾರಿಕ ಪ್ರಜ್ಞೆ ಮೊಳಕೆ ಒಡೆಯಿತು. ವೀರಶೈವ ತತ್ತ್ವ ಸಿದ್ಧಾಂತಗಳ ತಲಸ್ಪರ್ಶಿ ಅಧ್ಯಯನದೊಂದಿಗೆ ಕುಮಾರ ಸಂಭವ, ರಘುವಂಶ, ನಿಜಗುಣರ ಕೃತಿಗಳು, ಶತಕತ್ರಿಯ, ಶೂನ್ಯ ಸಂಪಾದನೆ, ಪ್ರಭುಲಿಂಗ ಲೀಲೆ, ಬಸವಪುರಾಣ ಮೊದಲಾದ ಕಾವ್ಯ ಪುರಾಣಗಳ ಅಧ್ಯಯನದಿಂದ ತಮ್ಮಲ್ಲಿನ ಜ್ಞಾನಭಂಡಾರ ವೃದ್ಧಿಯಾಗುವಂತೆ ನೋಡಿಕೊಂಡರು.

**ಭಾಲ್ಕಿ ಹಿರೇಮಠದ ಪೀಠಾಧಿಕಾರಿಯಾಗಿ:** ಚೆನ್ನಬಸವ ಅವರ ಸರಳತೆ, ಸಜ್ಜನಿಕೆ, ಮಾನವೀಯತೆ, ಪ್ರಾಣಿದಯೆ, ವೈಚಾರಿಕತೆ, ಮಾಡುವ ಕೆಲಸದಲ್ಲಿ ಶ್ರದ್ಧೆ, ನಿರಂತರ ಅಧ್ಯಯನ, ದೀನ ದಲಿತರ ಬಗ್ಗೆ ಅನುಕಂಪ, ಅಂತರಂಗ ಬಹಿರಂಗ ಶುದ್ಧಿ, ಅಹಿಂಸಾಮಾರ್ಗ, ಸದಾಚಾರ ಸದುವಿನಯ, ಆಧ್ಯಾತ್ಮಿಕ ಚಿಂತನೆ, ಶಿವಯೋಗಾನುಷ್ಠಾನ, ಕಾಯಕ ನಿಷ್ಠೆ ಇವೆಲ್ಲವನ್ನು ಸೂಕ್ಷ್ಮವಾಗಿ ಗಮನಿಸಿ ಮಠದ ಪೀಠಾಧಿಪತಿಯಾಗಲು ಸರ್ವರೀತಿಯಿಂದ ಅರ್ಹರು ಎಂದು ಭಾವಿಸಿ ೧೯೨೪ ರಲ್ಲಿ ಭಾಲ್ಕಿ ಹಿರೇಮಠಕ್ಕೆ ಪಟ್ಟಾಧಿಕಾರಿಯಾಗಿ ವಿಧ್ಯುಕ್ತವಾಗಿ ನೇಮಕ ಮಾಡಿದರು. ಅವರ ಪಟ್ಟಾಧಿಕಾರ ಸಮಾರಂಭಕ್ಕೆ ಶ್ರೀಮದ್ ಘನಲಿಂಗ ಚಕ್ರವರ್ತಿ ಪೂಜ್ಯ ಶ್ರೀ ರೇವಣಸಿದ್ಧ ಸ್ವಾಮಿಗಳು ದಯುಮಾಡಿಸಿ ಸ್ಥಿರಪಟ್ಟಾಧಿಕಾರ ನೆರವೇರಿಸಿಕೊಟ್ಟರು. ಪೂಜ್ಯರಾದ ಶ್ರೀ ಹಾನಗಲ್ಲ ಕುಮಾರಸ್ವಾಮಿಗಳು ಆಗಮಿಸಿ ಗಡಿಭಾಗದ ಈ ಪ್ರದೇಶದಲ್ಲಿ ಕನ್ನಡದ ಕಂಪನ್ನು ಪಸರಿಸಬೇಕೆಂದೂ, ಶಿಕ್ಷಣದಿಂಧ ವಂಚಿತರಾಗಿರುವ ಈ ಪ್ರದೇಶದ ಜನರಿಗೆ ಶಿಕ್ಷಣ ನೀಡಿ, ಅವರಲ್ಲಿ ಜ್ಞಾನಜ್ಯೋತಿಯನ್ನು ಬೆಳಗಿಸುವ ಕಾರ್ಯದಲ್ಲಿ ತಮ್ಮನ್ನು ಅರ್ಪಿಸಿಕೊಳ್ಳಬೇಕೆಂದು ಆಶೀರ್ವದಿಸಿದರು. ಧರ್ಮದ ಬಗ್ಗೆ ಜಾಗೃತಿಯನ್ನು ಮೂಡಿಸಬೇಕೆಂದು ತಿಳಿಸಿದರು. ಶ್ರೀ ಹಾನಗಲ್ ಕುಮಾರ ಸ್ವಾಮಿಗಳವರ ಸಲಹೆಯನ್ನು ತಲೆಯ ಮೇಲೆ ಹೊತ್ತು ತಮ್ಮ ಇಚ್ಛೆಯಂತೆ ಸೇವೆ ಮಾಡುವುದಾಗಿ ಪ್ರತಿಜ್ಞೆ ಮಾಡಿ, ಅಂದಿನಿಂದಲೇ ಕಾರ್ಯೋನ್ಮುಖರಾದರು. ತಾವು ಈ ಮಠದ ಚುಕ್ಕಾಣಿ ಹಿಡಿದುದು ಸಮಾಜಮುಖಿ ಸೇವೆಯಲ್ಲಿ ತೊಡಗಿಸಿಕೊಳ್ಳಲು ದೊರೆತ ಸದಾವಕಾಶ ಎಂದು ಭಾವಿಸಿದರು.

**ಶಿಕ್ಷಣ ಕ್ಷೇತ್ರ :** ಮಠಾಧ್ಯಕ್ಷರಾದ ಎರಡು ವರ್ಷದಲ್ಲೇ ಆಂಧ್ರ ಪ್ರದೇಶದ ನಾರಾಯಣ ಖೇಡ ತಾಲ್ಲೂಕಿನ ಮೋರಗಿಯಲ್ಲಿ 'ಶಾಂತಿ ವರ್ಧಕ' ಗುರುಕುಲ ಆಶ್ರಮ ಹೆಸರಿನಲ್ಲಿ ಶಾಲೆಯನ್ನು ಪ್ರಾರಂಭಿಸಿದರು. ಈ ಭೂಮಿಯಲ್ಲಿ ಗುಡಿಸುಲುಗಳನ್ನು ನಿರ್ಮಿಸಿ ಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಟ್ಟರು. ನಾಲ್ಕನೇ ತರಗತಿಯವರಿಗೆ ಶಿಕ್ಷಣ ದೊರೆಯುವಂತೆ ಮಾಡಿದರು. ನಿಜಾಮನ ಆಳ್ವಿಕೆಯಲ್ಲಿದ್ದ ಈ ಪ್ರದೇಶದಲ್ಲಿ ಕನ್ನಡ ಕಲಿಸಲು ಅವಕಾಶವಿರಲಿಲ್ಲ. ಪೂಜ್ಯರಲ್ಲಿದ್ದ ಉತ್ಕಟವಾಗಿದ್ದ ಕನ್ನಡಾಭಿಮಾನ, ಪ್ರೀತಿ ಶ್ರೀ ಹಾನಗಲ್ ಕುಮಾರಸ್ವಾಮಿಗಳವರ ಸಾನ್ನಿಧ್ಯದಲ್ಲಿ ಮಾಡಿದ ವಾಗ್ದಾನವನ್ನು ಸ್ಥಳಿಯರ ಸಹಕಾರದಿಂದ ಕನ್ನಡ ಶಾಲೆಗಳನ್ನು ನಡೆಸಿದರು. ಹೊರಗಡೆ ಉರ್ದುವಿನಲ್ಲಿ







ಪಾತಶಾಲೆ ಬೋರ್ಡ್‌ನ್ನು ಹಾಕಿ ಮಕ್ಕಳಿಗೆ ಕನ್ನಡ ಕಲಿಸಿದ ಅವರ ಕನ್ನಡ ಪ್ರೇಮ ಅಪಾರವಾದುದು.

ವಿದ್ಯಾರ್ಥಿಗಳಿಗೆ ಪ್ರಸಾದ ವ್ಯವಸ್ಥೆ ಹಾಗೂ ಶಿಕ್ಷಕರಿಗೆ ಸಂಬಳ ಕೊಡಲು ಗ್ರಾಮಗಳಲ್ಲಿ 'ಮುಷ್ಟಿಪಂಥ' ಯೋನೆಯನ್ನು ಅನುಷ್ಠಾನಕ್ಕೆ ತಂದರು. ಈ ಯೋಜನೆಯಂತೆ ಪ್ರತಿಯೊಂದು ಮನೆಯಲ್ಲಿಯೂ ಒಂದೊಂದು ಜೋಳಿಗೆ ಇಡುತ್ತಿದ್ದರು. ಮುಂಜಾನೆ ಗೃಹಿಣಿಯರು ಜೋಳ ಬೀಸುವ ಮುನ್ನ ಒಂದು ಮುಷ್ಠಿ ಜೋಳವನ್ನು ಜೋಳಿಗೆಗೆ ಹಾಕುತ್ತಿದ್ದರು. ಹೀಗೆ ಸಂಗ್ರಹವಾದ ಧಾನ್ಯಗಳಿಂದ ಮಕ್ಕಳಿಗೆ ಪ್ರಸಾದ ವ್ಯವಸ್ಥೆ ಹಾಗೂ ಶಿಕ್ಷಕರಿಗೆ ವೇತನ ನೀಡಲು ಬಳಸುತ್ತಿದರು. ದುಷ್ಕರ್ಮಿಗಳು ಕನ್ನಡ ಶಾಲೆಯನ್ನು ನಡೆಸದಂತೆ ಪ್ರತಿರೋಧ ವ್ಯಕ್ತಪಡಿಸಿದರೂ ಪೂಜ್ಯರ ಧೀಶಕ್ತಿಯ ಮುಂದೆ ಹಿಮ್ಮೆಟ್ಟಿದರು. ಪೂಜ್ಯರು ಕ್ರಾಂತಿಕಾರಕ ಹೆಜ್ಜೆ ಗಳನ್ನಿಡದೆ ಹೋಗಿದ್ದರೆ ಹೈದರಾಬಾದ್ ಕರ್ನಾಟಕದಲ್ಲಿ ಕನ್ನಡ ಉಳಿಯುತ್ತಿರಲಿಲ್ಲ, ಬೆಳೆಯುತ್ತಿರಲಿಲ್ಲ.

ಕನ್ನಡವನ್ನು ಕಲಿಯುವುದರಿಂದ ಆಗುವ ಅನುಕೂಲವನ್ನು ಪರಿಚಯ ಮಾಡಿಕೊಡುವುದರ ಮೂಲಕ ಕನ್ನಡ ಕಲಿಯಲು ಪ್ರೇರಣೆ ನೀಡುತ್ತಿದ್ದರು. ಶರಣ-ಶರಣೆಯರ ಉನ್ನತ ಜೀವನ ಮೌಲ್ಯಗಳು ನಮ್ಮ ಬದುಕಿನಲ್ಲಿ ಅಳವಡಿಸಿಕೊಂಡು ಬದುಕನ್ನು ಹಸನುಮಾಡಿಕೊಳ್ಳಲು ಸಾಧ್ಯವಾಗುತ್ತದೆ ಎಂದು ಆ ಭಾಗದ ಜನರಿನಲ್ಲಿ ಕನ್ನಡ ಜಾಗೃತಿಯನ್ನು ಮೂಡಿಸುವಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಿದರು. "ಕನ್ನಡಕ್ಕೆ ಕೈ ಎತ್ತು ನಿನ್ನ ಕೈ ಕಲ್ಪವೃಕ್ಷವಾಗುತ್ತದೆ" ಕುವೆಂಪುರವರ ದಿವ್ಯವಾಣಿಯಂತೆ ಕನ್ನಡ ಪ್ರೇಮವನ್ನು ಉದ್ದೀಪನ ಗೊಳಿಸಿದರು. 'ಕನ್ನಡಕ್ಕೆ ಜಯವಾಗಲಿ' ಕನ್ನಡ ಶಿಕ್ಷಕರಿಗೆ ಜಯವಾಗಲಿ' ಎಂದು ಜಯಘೋಷ ಮಾಡುವುದರ ಮೂಲಕ ಪ್ರೋತ್ಸಾಹಿಸುತ್ತಿದ್ದರು. ಆಂಧ್ರ ಪ್ರದೇಶದ ತೋರಣಗಿಯಲ್ಲಿ, ಸಂಗಮ ಗ್ರಾಮದಲ್ಲಿ, ಲಾತೂರಿನಲ್ಲಿ, ಸೋಲ್ಲಾಪುರ, ಕಮಲಾನಗರ, ಭಾಲ್ಕಿ, ಬೀದರನಲ್ಲಿ ಶಾಲೆ ಕಾಲೇಜುಗಳನ್ನು ಸ್ಥಾಪಿಸಿ ಕನ್ನಡಕ್ಕೆ ಹೆಚ್ಚು ಒತ್ತು ನೀಡಿ ಆ ಭಾಗದ ಜನತೆಯನ್ನು ವಿದ್ಯಾವಂತರಾಗಲು ಶ್ರಮಿಸಿದರು. ಅವರೆಲ್ಲ ಸ್ವಾವಲಂಬಿಗಳಾನ್ನಾಗಿ ಜೀವನದಲ್ಲಿ ಕಾಯಕ ತತ್ತ್ವವನ್ನು ಆಳವಡಿಸಿಕೊಂಡು ಸ್ವಾಭಿಮಾನದಿಂದ ಬದುಕುವ ಮಾರ್ಗವನ್ನು ತೋರಿಸಿದರು.

ಪೂಜ್ಯ ಶ್ರೀ ಚೆನ್ನಬಸವ ಪಟ್ಟದೇವರಲಿದ್ದ ಕನ್ನಡಾಭಿಮಾನವನ್ನು ಕಂಡು, ನಾಡಿನ ಹಿರಿಯ ಸಾಹಿತಿಗಳಾದ ಡಾ. ಶಾಂತರಸ, ಡಾ ಚೆನ್ನವೀರ ಕಣವಿ, ಡಾ. ಗುರುಲಿಂಗ ಕಾಪಸೆ, ದೇ. ಜವರೇಗೌಡ ಮೊದಲಾದವರು ಪೂಜ್ಯರನ್ನು ಕನ್ನಡ ಸ್ವಾಮಿಗಳೆಂದು ಕರೆಯುವುದರ ಮೂಲಕ ಅವರಲ್ಲಿನ ಅದಮ್ಯ ಕನ್ನಡ ಪ್ರೇಮಕ್ಕೆ, ಗೌರವ ಸೂಚಿಸಿದ್ದಾರೆ. ಅವರ ಕನ್ನಡ ಶಿಕ್ಷಣ ಪ್ರೇಮವನ್ನು ಭಕ್ತರೊಬ್ಬರು ತ್ರಿಪದಿಯ ಮೂಲಕ ಅನಾವರಣಗೊಳಿಸಿದ್ದಾರೆ.

**"ಭಾಲಕಿ ಶಿವಯೋಗಿ ಎಲ್ಲೆಲ್ಲಿ ತಿರುಗ್ಯಾರ**
**ಶಿಕ್ಷಣದ ಅನ್ನ ಉಣಿಸ್ಯಾರ-ಗಡಿನಾಡಿನೊಳು**
**ಕನ್ನಡ ಬಾವುಟ ಮೆರಸ್ಯಾರ."**

ಈ ತ್ರಿಪದಿಯ ಪೂಜ್ಯರ ನಾಡು ನುಡಿಯ ಅಭಿಮಾನಕ್ಕೆ ಭಾಷ್ಯ ಬರೆದಂತಿದೆ.

ಜಗಜ್ಯೋತಿ ಬಸವಣ್ಣನವರಂತೆ ಸರಳತೆ ನಮ್ರತೆಯನ್ನು ಮೈಗೂಡಿಸಿಕೊಂಡಿದ್ದರು, ಸರಳತೆಗೆ ಮತ್ತೊಂದು ಹೆಸರು ಪೂಜ್ಯ ಶ್ರೀಗಳು ಎಂಬ ಮಾತು ಜನಜನಿತವಾಗಿತ್ತು. ಇದಕ್ಕೆ ಒಂದು ಜ್ವಲಂತ ಉದಾಹರಣೆ : ೧೯೭೪ ರಲ್ಲಿ ಭಾಲ್ಕಿ ಹಿರೇಮಠದಲ್ಲಿ ಪೂಜ್ಯರನ್ನು ಕುರಿತು ಕನ್ನಡ ಕವಿ ಸಮ್ಮೇಳನವನ್ನು ಏರ್ಪಡಿಸಲಾಗಿತ್ತು. ಸಮ್ಮೇಳನದ ಕೊನೆಯಲ್ಲಿ ಪೂಜ್ಯ ಶ್ರೀ ಚೆನ್ನಬಸವ ಪಟ್ಟದ್ದೇವರು ನೀಡಿದ ಆಶೀರ್ವಚನದಲ್ಲಿ ನುಡಿದ ಶಿವನುಡಿಗಳಲ್ಲಿ ಅವರ ವಿನಯವಂತಿಕೆ ಎದ್ದು ಕಾಣುತ್ತಿತ್ತು.

"ಬಡಸೇವಕನ ಮೇಲೆ ಅನಂತ ಪುಷ್ಪದ ಹೊರೆ ಹಾಕಿದ್ದೀರಿ. ಶಿಕ್ಷಣದಲ್ಲಿ ಬಹಳ ಹಿಂದುಳಿದವ, ಅಂಥ ಯೋಗಿಯೂ ಅಲ್ಲ, ಮೂಢ. ನಿಮ್ಮೆಲ್ಲ ತಂದೆ ತಾಯಿಗಳ ಮಗು. ಸಮಾಜ ಸೇವಕ, ಧರ್ಮದ ಸೇವಕ, ಎರಡು ತಾಸಿನಿಂದ ನನ್ನನ್ನು ಹೊಗಳಿದ್ದೀರಿ. ನನಗೆ ಒಡೆಯನಾದ ಪರಮಾತ್ಮನನ್ನು ಹೊಗಳುವುದು ಒಳ್ಳೆಯದು ಪೂಜ್ಯಭಾವದಿಂದ ನನ್ನನ್ನು ಹೊಗಳಿದ್ದೀರಿ. ಹನ್ನೆರಡನೆಯ ಶತಮಾನದ ಚೆನ್ನಬಸವಣ್ಣನ ಪಾದಕ್ಕೆ ಇವೆಲ್ಲಾ ಅರ್ಪಿತ."

ಪೂಜ್ಯರ ಒಂದೊಂದು ನುಡಿಯೂ ಬಸವಣ್ಣನವರ ಸದುವಿನಯ ನೆನಪಿಗೆ ತರುತ್ತವೆ

ಪರಮಪೂಜ್ಯರು ಶ್ರೀಮಠದ ಅಧ್ಯಕ್ಷರಾದ ನಂತರ ಮೊದಲು ಮಾಡಿದ ಕೆಲಸ ಮೂಲ ಹಾಗೂ ಶಾಖಾಮಠಗಳ ಸ್ಥಿರ-ಚರ ಆಸ್ತಿಯನ್ನು ಸಂರಕ್ಷಣೆ ಮಾಡಿದರು, ಸ್ವತಃ ಹೊಲಕ್ಕೆ ಹೋಗಿ ಉತ್ತಿ ಬಿತ್ತಿದರು. ಆರ್ಥಿಕ ಸಂಪನ್ಮೂಲಗಳನ್ನು ಹೆಚ್ಚಿಸಿಕೊಂಡರು.

ಕೃಷಿಯೊಂದಿಗೆ ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಪ್ರಗತಿಯನ್ನು ಸಾಧಿಸಿದರು. ಕಾರಾಮುಂಗಿ, ಮೈನಳ್ಳಿ, ಮೋರಗಿ ಮಠಗಳು ಉನ್ನತ ಸ್ಥಿತಿಗೆ ಬರಲು ಶ್ರಮಿಸಿದರು.

**ಸಾಹಿತ್ಯ ಕ್ಷೇತ್ರ :** ಜನರಲ್ಲಿ ಜ್ಞಾನದ ದಿಗಂತವನ್ನು ವಿಸ್ತರಿಸುವ ದೃಷ್ಟಿಯಿಂದ "ಬಸವ ಧರ್ಮ ಪ್ರಸಾರ ಸಂಸ್ಥೆ" ಎಂಬ ಪ್ರಕಾಶನ ಸಂಸ್ಥೆಯನ್ನು ಪ್ರಾರಂಭಿಸಿ ನಾಡಿನ ಸಾಹಿತಿಗಳು, ವಿದ್ವಾಂಸರಿಂದ ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ ಕೃತಿಗಳನ್ನು ಬರೆಸಿ ಪ್ರಕಟಿಸಿದರು. ಈ ಸಂಸ್ಥೆಯಿಂದ ಐವತ್ತಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಲಾಗಿದೆ. ಇವುಗಳ ಜೊತೆಗೆ 'ಶಾಂತಿ ಕಿರಣ' ಎಂಬ ಧಾರ್ಮಿಕ ವಿಷಯಗಳಿಗೆ ಮೀಸಲಾದ ದ್ವೈಮಾಸಿಕ ಪತ್ರಿಕೆಯನ್ನು ಪ್ರಾರಂಭಿಸಿದರು.

**ಸಾಮಾಜಿಕ ಸೇವೆ :** ಪೂಜ್ಯ ಶ್ರೀ ಚೆನ್ನಬಸವ ಪಟ್ಟದ್ದೇವರು ಪೂರ್ವಾಶ್ರಮದಲ್ಲಿದ್ದಾಗ ಬಸವಾದಿ ಶರಣರ ಜೀವನ ಗಾಥೆಗಳನ್ನು ಅಧ್ಯಯನ ಮಾಡಿ ಅದರಿಂದ ಪ್ರಭಾವಿತರಾಗಿ ಬಸವಣ್ಣನವರ ಆದರ್ಶಗಳ ಮುಂಬೆಳಕಿನಲ್ಲಿ ಸಮಾಜವನ್ನು ಅಭಿವೃದ್ಧಿ ಪಥದತ್ತ ಕೊಂಡೊಯ್ಯಬೇಕೆಂಬ ಹಂಬಲ ಹೊಂದಿದ್ದರು. ಪಟ್ಟಾಧಿಕಾರವಾದ ನಂತರ ಸಮಾಜಮುಖಿ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಬಸವಣ್ಣನವರು ನುಡಿದು ನಡೆದಂತೆ, ಅಸ್ಪೃಶ್ಯರನ್ನು ಸಮಾಜದ ಮುಖ್ಯ ವಾಹಿನಿಯಲ್ಲಿ ತರಲು ಕ್ರಾಂತಿಕಾರಕ ಹೆಜ್ಜೆಗಳನ್ನಿಟ್ಟರು. ೧೯೪೮ ರಲ್ಲಿಯೇ ಶ್ರೀಮಠದ ಹಾಗೂ ಭಾಲ್ಕೇಶ್ವರ ದೇವಾಲಯದ ಆವರಣದಲ್ಲಿರುವ ಬಾವಿಯಲ್ಲಿನ ನೀರನ್ನು ಅಸ್ಪೃಶ್ಯರು ಉಪಯೋಗಿಸಲು ಪೂಜ್ಯರೇ ಮುಂದೆ ನಿಂತು ಅವಕಾಶ ಕಲ್ಪಿಸಿಕೊಟ್ಟರು. ಇದರಿಂದ ಮೇಲ್ವರ್ಗದವರ ಕೆಂಗಣ್ಣಿಗೆ ಗುರಿಯಾಗಬೇಕಾಯಿತು. ಇದರಿಂದ ವಿಚಲಿತರಾಗದೆ ತಮ್ಮ ಕ್ರಾಂತಿಕಾರಕ ಚಟುವಟಿಕೆಗಳನ್ನು ಮುಂದುವರಿಸಿದರು.

**ಲಿಂಗದೀಕ್ಷೆ :** ಶರಣ ಧರ್ಮದಿಂದ ಪ್ರಭಾವಿತರಾಗಿ, ಪ್ರೀತಿಯಿಂದ ಮುಕ್ತ ಮನಸ್ಸಿನಿಂದ ಶರಣ ಧರ್ಮವನ್ನು ಸ್ವೀಕರಿಸಲು ಬಂದವರಿಗೆ ಪೂಜ್ಯರು ಲಿಂಗ ದೀಕ್ಷೆಯನ್ನು ನೀಡಿ ಸಮಾಜದಲ್ಲಿ ತಲೆಎತ್ತಿ ಸ್ವಾಭಿಮಾನದಿಂದ ಜೀವನ ನಡೆಸುವಂತೆ ಮಾಡಿದರು. ಒಬ್ಬ ಲಿಂಗಧಾರಿ ಶಿಕ್ಷಕರು ಕೆಳವರ್ಗದ ಹುಡುಗಿಯನ್ನು ಪ್ರೀತಿಸಿ ವಿವಾಹವಾಗಲು ಬಯಸಿದಾಗ ಪೂಜ್ಯರು ಮುಂದೆ ನಿಂತು ಹುಡುಗಿಗೆ ಲಿಂಗ ದೀಕ್ಷೆಯನ್ನು ನೀಡಿ ನೂರಾರು ಜನರ ಸಮಕ್ಷಮದಲ್ಲಿ ವಿವಾಹ ಮಾಡಿಸಿದರು. ಹಾಗೆಯೇ ಜಂಗಮರ ಯುವಕ ಮುಸ್ಲಿಂ ಹುಡುಗಿಯನ್ನು ಪ್ರೀತಿಸಿ ಕೈ ಹಿಡಿಯುವ ಬಯಕೆಯನ್ನು ವ್ಯಕ್ತಪಡಿಸಿದಾಗ ಮುಸ್ಲಿಂ ಹುಡುಗಿಗೆ ಲಿಂಗದೀಕ್ಷೆಯನ್ನು ನೀಡಿ ಮದುವೆ ಮಾಡಿಸಿದುದು ಆ ಕಾಲಕ್ಕೆ ಕ್ರಾಂತಿಕಾರಕಯಾದುದು. ಇಂತಹ ಅನೇಕರ ವಿವಾಹವನ್ನು ಮಾಡಿಸಿ ಸುಖಮಯ ಜೀವನ ನಡೆಸುವಂತೆ ಆಶೀರ್ವದಿಸಿದ್ದಾರೆ.

ಮದುವೆಯಲ್ಲಿ ದುಂದುವೆಚ್ಚವಾಗುವುದನ್ನು ತಪ್ಪಿಸಲು ಸಾಮೂಹಿಕ ವಿವಾಹವನ್ನು ಏರ್ಪಡಿಸಿ, ಸರಳವಾಗಿ ಮಾಡಿ ಆದರ್ಶ ಪ್ರಾಯರಾಗಿದ್ದಾರೆ. ಪೂಜ್ಯ ಶ್ರೀ ಚನ್ನಬಸವಪಟ್ಟದ್ದೇವರದು ಮಾತೃಹೃದಯ, ದೀನ ದಲಿತರು ಸಮಾಜದಲ್ಲಿ ಪ್ರಾಣಿ ಪಶುಗಳಿಗಿಂತಲೂ ಹೀನವಾಗಿ ಬದುಕುತ್ತಿರುವುದನ್ನು ಕಂಡಾಗ ಪೂಜ್ಯರ ಅಂತಃಕರಣ ಮಿಡಿದು ಅವರೆಲ್ಲರನ್ನು ಪ್ರೀತಿಯಿಂದ, ಹೃದಯ ತುಂಬ ಅಪ್ಪಿಕೊಂಡು, ಸಮಾಜದಲ್ಲಿ ಜೀವಿಸುತ್ತಿರುವವರೆಲ್ಲ ಒಂದೇ ಎಂದು ಸಾರಿ ಪ್ರೋತ್ಸಾಹಿಸಿದರು. ಲಿಂಗ ದೀಕ್ಷೆಯನ್ನು ಪಡೆದವರೆಲ್ಲರೂ ಒಂದೇ ಎಂದು ಭಾವಿಸಿದ ಶ್ರೀಗಳು 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಎಲ್ಲರೂ ಸಮಾನರು' ಎಂದು ನುಡಿದು ಶ್ರೀಮಠದಲ್ಲಿ ಆ ನುಡಿಯನ್ನು ಅನುಷ್ಠಾನಕ್ಕೆ ತಂದರು. ಲಿಂಗ ದೀಕ್ಷೆಯನ್ನು ಪಡೆದವರಿಗೆ ತಮ್ಮ ಮಠದಲ್ಲಿ ಹಾಗೂ ಶಾಖಾಮಠಗಳಲ್ಲಿ ಕಾಯಕ ನೀಡಿ ಅವರೊಡನೆ ಸಮಾನತೆಯಿಂದ ನಡೆದುಕೊಂಡಿದ್ದಾರೆ.

ಬೀದರ ಜಿಲ್ಲೆಯ ಔರಾದ್ ತಾಲ್ಲೂಕಿನ ಬೆಲ್ದಾಳ ಗ್ರಾಮದ 'ವಿಠ್ಠಲ' ಎಂಬ ಅಸ್ಪೃಶ್ಯ ವ್ಯಕ್ತಿಗೆ ಲಿಂಗದೀಕ್ಷೆ ನೀಡಿ ಅವರಿಗೆ 'ಸಿದ್ಧರಾಮ' ಎಂದು ನಾಮಕರಣ ಮಾಡಿ, ಜಂಗಮ ದೀಕ್ಷೆ ನೀಡಿ 'ಈಗ ನೀವು ಗುರುಮುಟ್ಟಿ ಗುರುವಾಗಿದ್ದೀರಿ, ನೀವು ಕೂಡ ಉಳಿದವರಿಗೆ ಲಿಂಗ ದೀಕ್ಷೆಯನ್ನು ಕೊಡಬಹುದು' ಎಂದು ಆಶೀರ್ವದಿಸಿದರು. 'ಸಿದ್ಧರಾಮ ಬೆಲ್ದಾಳ' ಅವರು ಪೂಜ್ಯರ ಆಶೀರ್ವಾದದ ಮುಂಬೆಳಕಿನಲ್ಲಿ ತಮ್ಮ ಆಧ್ಯಾತ್ಮಿಕ ಜೀವನವನ್ನು ರೂಪಿಸಿಕೊಂಡು ಸಮಾಜಮುಖಿ ಸೇವೆಯಲ್ಲಿ ತೊಡಗಿಸಿಕೊಂಡಿದ್ದಾರೆ.

**ನೀಲಾಂಬಿಕಾ ಆಶ್ರಮ :** ಮಹಿಳೆಯರು ಮನೆಯಲ್ಲಿ ನಾಲ್ಕು ಗೋಡೆಗಳ ಮಧ್ಯೆ ಜೀವನವನ್ನು ನಡೆಸುವುದನ್ನು ಕಂಡ ಪೂಜ್ಯ ಶ್ರೀಗಳು ಅವರನ್ನು ಸಮಾಜದ ಮುಖ್ಯವಾಹಿನಿಯಲ್ಲಿ ತರಲು 'ನೀಲಾಂಬಿಕಾ ಆಶ್ರಮ'ವನ್ನು ಸ್ಥಾಪನೆ ಮಾಡಿ ತನ್ಮೂಲಕ ಸಾಹಿತ್ಯ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಕ್ರಿಯಾಶೀಲರಾಗಿ ಭಾಗವಹಿಸುವಂತೆ



ಮಾಡಿದರು. ಮಹಿಳೆಯರಿಗಾಗಿಯೇ ಶಾಲೆ, ಕಾಲೇಜುಗಳನ್ನು ಪ್ರಾರಂಭಿಸಿದರು. ಔರಾದ-ಸಂಗಮ ಗ್ರಾಮಗಳ ಮಧ್ಯೆ ನದಿಯ ದಂಡೆಯ ಮೇಲೆ ನೀಲಾಂಬಿಕಾ ಆಶ್ರಮ ಸ್ಥಾಪಿಸಿ, ಅಲ್ಲಿ ಪ್ರತಿನಿತ್ಯ ಪ್ರಾರ್ಥನೆ, ಪ್ರವಚನ, ವಿಭೂತಿ ತಯಾರಿಕೆ, ಶರಣರ ಜಯಂತ್ಯುತ್ಸವಗಳನ್ನು ಕಾಲಕಾಲಕ್ಕೆ ನಡೆಯುವಂತೆ ಮಾಡಿದ್ದಾರೆ. ಅಂಗವಿಕಲ ಮಹಿಳೆಯರಿಗೆ ಉಚಿತ ಪ್ರಸಾದ ಮತ್ತು ವಸತಿಯನ್ನು ಕಲ್ಪಿಸಿಕೊಟ್ಟು, ಸಂಗೀತ ತರಬೇತಿಯನ್ನು ನೀಡುವ ವ್ಯವಸ್ಥೆ ಮಾಡಿದರು.

**ಅನಾಥ ಶಿಶುಗಳ ಲಾಲನೆ-ಪೋಷಣೆ :** ಹೆತ್ತವರ ಅನಾದಾರಕ್ಕೆ ತುತ್ತಾಗಿ ಬೀದಿಯಲ್ಲಿ, ತಿಪ್ಪೆಯಲ್ಲಿ, ಕೆರೆಯ ದಂಡೆಯಲ್ಲಿ ಕಿಂಚಿತ್ತೂ ಕರುಣೆಯಿಲ್ಲದೆ ಎಸೆದ ಅನಾಥ ನವಜಾತ ಶಿಶುಗಳನ್ನು ಮಠಕ್ಕೆ ತಂದು ಸಕಲ ಸೌಲಭ್ಯಗಳನ್ನು ನೀಡಿ, ಪ್ರೀತಿಯ ಧಾರೆ ಎರೆದು ಉತ್ತಮ ರೀತಿಯಲ್ಲಿ ಪೋಷಿಸಿ ಬೆಳೆಸುವುದರ ಮೂಲಕ ಅವರ ಭವಿಷ್ಯದಲ್ಲಿ ಬೆಳಕಾಗಿದ್ದಾರೆ. ಆ ಮಕ್ಕಳಿಗೆ ಉತ್ತಮ ಶಿಕ್ಷಣದ ಜೊತೆಗೆ ನೈತಿಕ ಶಿಕ್ಷಣವನ್ನು ನೀಡಿ ಸಮಾಜದಲ್ಲಿ ಸ್ವಾವಲಂಬಿಯಾಗಿ ಜೀವನ ನಡೆಸುವಂತೆ ಮಾಡುವ ಪೂಜ್ಯರು ಮಾನವೀಯತೆ, ಔದಾರ್ಯದಿಂದ ಆದರ್ಶರಾಗಿದ್ದಾರೆ.

**ಪ್ರಶಸ್ತಿ-ಗೌರವ :** ಪರಮಪೂಜ್ಯ ಶ್ರೀಗಳವರು ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸಲ್ಲಿಸಿದ ಅನುಪಮ ಸೇವೆಗಾಗಿ ಅನೇಕ ಮಠ ಮಾನ್ಯಗಳು, ಸಂಘ ಸಂಸ್ಥೆಗಳು, ಸರ್ಕಾರ, ವಿಶ್ವವಿದ್ಯಾಲಯಗಳು ಪ್ರಶಸ್ತಿಗಳನ್ನು ನೀಡಿ ಗೌರವಿಸಿವೆ. ಪೂಜ್ಯರಿಗೆ ನೂರು ವರ್ಷ ತುಂಬಿದ ಶುಭ ಸಂದರ್ಭದಲ್ಲಿ ಶತಮಾನೋತ್ಸವ ಸಮಾರಂಭವನ್ನು ಅರ್ಥಪೂರ್ಣವಾಗಿ 'ನಭೂತೋ ನಭವಿಷ್ಯತಿ' ಎಂಬಂತೆ ನಡೆಸಿ ಧನ್ಯತೆಯನ್ನು ಪಡೆಯಿತು. ಶತಮಾನೋತ್ಸವ ಸಮಾರಂಭದಲ್ಲಿ ಅರ್ಪಿಸಿದ 'ಕಾಯಕ ಪರಿಣಾಮಿ' ಸಂಭಾವನಾ ಗ್ರಂಥ ನಾಡಿನ ಹಿರಿಯ ವಿದ್ವಾಂಸರ ಮೌಲಿಕ ಲೇಖನಗಳನ್ನೊಳಗೊಂಡಿದ್ದು ಆಕರ ಗ್ರಂಥವಾಗಿದೆ. ಗುಲ್ಬರ್ಗಾ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ನೀಡಿ ತಮ್ಮ ಗೌರವವನ್ನು ಹೆಚ್ಚಿಸಿಕೊಂಡಿದೆ. ಕರ್ನಾಟಕ ಸರ್ಕಾರ 'ಕರ್ನಾಟಕ ರಾಜ್ಯೋತ್ಸವ' ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

**ಸಿದ್ಧಗಂಗಾ ಮಠದೊಂದಿಗೆ ಅವಿನಾಭಾವ ಸಂಬಂಧ :** ಪೂಜ್ಯ ಡಾ. ಶ್ರೀ ಶ್ರೀ ಚೆನ್ನಬಸವ ಪಟ್ಟದ್ದೇವರು ಶ್ರೀ ಸಿದ್ಧಗಂಗಾ ಮಠ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅನನ್ಯ ಗೌರವವನ್ನಿಟ್ಟುಕೊಂಡಿದ್ದರು. ಶ್ರೀಮಠದಲ್ಲಿ ನಡೆದ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಮೌಲಿಕವಾದ ಶಿವನುಡಿಗಳನ್ನು ದಯಪಾಲಿಸಿದ್ದಾರೆ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಭಾಲ್ಕಿ ಶ್ರೀಗಳವರನ್ನು ಕಂಡರೆ ತುಂಬಾ ಗೌರವ ಅಭಿಮಾನವನ್ನಿಟ್ಟುಕೊಂಡಿದ್ದರು. ಭಾಲ್ಕಿ ಮಠದಲ್ಲಿ ಏಪ್ರಿಲ್ ೨೦, ೨೦೦೭ ರಂದು ನಡೆದ ಪೂಜ್ಯ ಚೆನ್ನಬಸವ ಪಟ್ಟದೇವರ ಕರ್ತೃಗದ್ದುಗೆಯ ಸ್ಥಳದಲ್ಲಿ ನಿರ್ಮಿಸಲಾದ ಅತ್ಯಾಕರ್ಷಕ ಧ್ಯಾನ ಮಂಟಪವನ್ನು ಲೋಕಾರ್ಪಣೆ ಮಾಡಿದುದನ್ನು ಈ ಸಂದರ್ಭದಲ್ಲಿ ಸ್ಮರಿಸಬಯಸುತ್ತೇನೆ.

ನಾನು ೧೯೭೮ ರಲ್ಲಿ ಬೀದರನಲ್ಲಿ ಸರ್ಕಾರಿ ಸೇವೆಯಲ್ಲಿದ್ದಾಗ ಜಾನಪದ ಕ್ಷೇತ್ರ ಕಾರ್ಯ ಮಾಡಲು ಭಾಲ್ಕಿ ಸಮೀಪದ ಗ್ರಾಮಗಳಿಗೆ ಹೋದ ಸಂದರ್ಭದಲ್ಲಿ ಭಾಲ್ಕಿ ಮಠಕ್ಕೆ ಭೇಟಿ ನೀಡಿ ಪೂಜ್ಯರ ಆಶೀರ್ವಾದ ಪಡೆದುದನ್ನು ಸ್ಮರಿಸುವಾಗ ಧನ್ಯತಾಭಾವನೆ ಮೂಡುತ್ತದೆ.

ಪೂಜ್ಯ ಶ್ರೀಗಳವರು ೧೦೯ ವಸಂತಗಳ ಸಾರ್ಥಕ ಜೀವನ ನಡೆಸಿ, ಸಮಾಜ ಸೇವೆಯಲ್ಲಿ ತಮ್ಮನ್ನು ಅರ್ಪಿಸಿಕೊಂಡು ಏಪ್ರಿಲ್ ೨೨, ೧೯೯೯ ರಂದು ಲಿಂಗದೊಳಗಾದರು. ಅವರು ಮಾಡಿದ ಸಾಧನೆಗಳು, ಬಿಟ್ಟು ಹೋದ ಆದರ್ಶಗಳು, ಜೀವನ ಮೌಲ್ಯಗಳು ಹಚ್ಚ ಹಸಿರಾಗಿವೆ. ಸದ್ದುಗದ್ದಲವಿಲ್ಲದೆ ಅವರು ಮಾಡಿದ ನಿಷ್ಕಾಮ ಸೇವೆ ಅನುಪಮವಾದುದು. ಅವರು ಮಾಡಿದ ಸಾಧನೆಗೆ ಕರ್ನಾಟಕ ಸರ್ಕಾರ ಕೊಡ ಮಾಡುವ 'ಕರ್ನಾಟಕ ರತ್ನ', 'ಬಸವ ರಾಷ್ಟ್ರೀಯ ಪ್ರಶಸ್ತಿ'ಯನ್ನು ನೀಡಿ ಗೌರವಿಸಬೇಕಾಗಿತ್ತು. ಸರ್ಕಾರಕ್ಕೆ ಬದ್ಧತೆಯಿದ್ದರೆ, ನೋಡುವ ಕಣ್ಣುಗಳಿದ್ದರೆ, ಈಗಲಾದರೂ ಮರಣೋತ್ತರವಾಗಿಯಾದರು 'ಕರ್ನಾಟಕ ರತ್ನ', 'ಬಸವ ಪ್ರಶಸ್ತಿ'ಗಳನ್ನು ನೀಡಿ ಗೌರವ ಸಲ್ಲಿಸಲಿ ಎಂದು ಆಶಿಸುತ್ತೇನೆ.

ಪರಮಪೂಜ್ಯ ಡಾ. ಶ್ರೀ ಚನ್ನಬಸವ ಪಟ್ಟದ್ದೇವರು ಕರಕಮಲ ಸಂಜಾತರಾದ ಪೂಜ್ಯ ಡಾ. ಶ್ರೀ ಶ್ರೀ ಬಸವಲಿಂಗ ಪಟ್ಟದ್ದೇವರಿಗೆ ಜೂನ್ ೨, ೧೯೮೫ ರಂದು ಅಧಿಕಾರ ವಹಿಸಿಕೊಟ್ಟರು. ಅಂದಿನಿಂದ ತಮ್ಮ ಗುರುಗಳ ಆಶೀರ್ವಾದದ ಶ್ರೀರಕ್ಷೆಯಲ್ಲಿ ಶ್ರೀಮಠವನ್ನು ಪ್ರಗತಿ ಪಥದಲ್ಲಿ ಮುನ್ನಡೆಸುತ್ತಿದ್ದಾರೆ.

**(ಮಾಹಿತಿ: ಭಾಲ್ಕಿ ಹಿರೇಮಠ, ಲೇ. ಡಾ. ಜಿ.ಬಿ. ವಿಸಾಜಿ., ಪ್ರ. ಸಿದ್ಧಗಂಗಾ ಪ್ರಕಾಶನ, ಶ್ರೀ ಸಿದ್ಧಗಂಗಾ ಕ್ಷೇತ್ರ).**

ಸಾಂದರ್ಭಿಕ

# ಬಸವಣ್ಣನವರ ವಚನಗಳಲ್ಲಿ ಶಿವತತ್ತ್ವ-ಶಿವಚಿಂತನೆ

– ಯು.ಎನ್. ಸಂಗನಾಳಮಠ *

ಹನ್ನೆರಡನೆಯ ಶತಮಾನದಲ್ಲಿ ವಚನಕಾರರು ವಚನಗಳ ಮುಖಾಂತರ ಕ್ರಾಂತಿಕಾರಿ ವಿಚಾರಗಳನ್ನು ಮೂಡಿಸುವ ಮೂಲಕ ಜನರನ್ನು ಜಾಗೃತಗೊಳಿಸಿದರು. ಶಾಸ್ತ್ರ ಪುರಾಣಗಳಲ್ಲಿದ್ದ ಯಜ್ಞ ಯಾಗಗಳ ಹೆಸರಿನಲ್ಲಿ ನಡೆಯುತ್ತಿದ್ದ ಬಲಿಗಳನ್ನು, ಅಂಧಶ್ರದ್ಧೆ ಸಂಪ್ರದಾಯಗಳನ್ನು ಖಂಡಿಸಿದವರೆಂದರೆ ಶಿವಶರಣರು. ಶಿವಶರಣರೆಲ್ಲರೂ ಶಿವೋಪಾಸಕರು. ವೀರಶೈವರ ಏಕದೇವೋಪಾಸನೆಗೆ ಶಿವನೇ ಮೂಲ. ಆತನೇ ಪರಮಾತ್ಮ.

**ಸ್ವಾಮಿ ನೀನು ಶಾಶ್ವತನು ನೀನು**
**ಎತ್ತಿದೆ ಬಿರುದ ಜಗವೆಲ್ಲರಿಯಲು**
**ಮಹಾದೇವ ಮಹಾದೇವ**
**ಇಲ್ಲಿಂದ ಮೇಲೆ ಶಬ್ದವಿಲ್ಲ**
**ಪಶುಪತಿ ಜಗಕ್ಕೇಕೋದೇವ**
**ಸ್ವರ್ಗ ಮರ್ತ್ಯ ಪಾತಾಳದೊಳಗೆ**
**ಒಬ್ಬನೇ ದೇವ ಕೂಡಲಸಂಗಮದೇವ.**

ಮೂರು ಲೋಕಗಳ ಕಲ್ಪನೆ ಜಗತ್ತು. ಪರಿಣಾಮ ಹೊಂದುವ ವಸ್ತು ಸಂಚಯವೇ ಜಗತ್ತು. ಈ ಪರಿಣಾಮದ ಅಧಿದೇವತೆ ಪಶುಪತಿ. ಎಲ್ಲಾ ಜೀವಿಗಳಿಗೂ ಒಡೆಯ. ಹೀಗೆ ಶಿವನ ಅರ್ಥಪೂರ್ಣ ಪರಿಕಲ್ಪನೆಯಲ್ಲಿ ತನ್ಮಯರಾಗಿ ಆತನೊಬ್ಬನೇ ದೇವ ಎನ್ನುತ್ತಾರೆ. ಇದರ ಹಿಂದಿರುವ ದೈವತ್ವದ ಅನುಭಾವಿಕ ನಿಲುವನ್ನು ಗಮನಿಸಬೇಕು. ಬಸವಣ್ಣನವರು ತಮ್ಮ ಹಲವಾರು ವಚನಗಳಲ್ಲಿ ಶಿವತತ್ತ್ವ, ಶಿವಕಾರುಣ್ಯ, ಶಿವ-ಜೀವ ಸಂಬಂಧ ಶಿವದೀಕ್ಷೆ, ಶಿವಚಿಂತೆ, ಶಿವಭಕ್ತಿ ಮತ್ತು ಭಕ್ತ, ಶಿವಾಲಯ, ಶಿವರಾತ್ರಿ ಹೀಗೆ ನಾನಾ ವಿಷಯಗಳ ಬಗ್ಗೆ ನಿರೂಪಿಸಿದ್ದಾರೆ. ಶಿವತತ್ತ್ವ ಬಗ್ಗೆ –

**ಮುತ್ತು ಉದಕದಲಾಗದು, ಉದಕ ಮುತ್ತಿನಲಾಗದು**
**ತತ್ತ್ವ ಘಟಿಸಿದ ಸುಮುಹೂರ್ತದಲ್ಲಲ್ಲದೆ**
**ಚಿತ್ತ ವೇದ್ಯವಾಗದು ಸದ್ಗುರುವಿನ ಕರುಣಕ್ಕಲ್ಲದೆ**
**ಕರ್ತು ಕೂಡಲಸಂಗಮದೇವರ ಒಲವಿನ ದಯದ**
**ಚಿತ್ತವಿಡಿದಂಗಲ್ಲದೆ ಶಿವತತ್ತ್ವ ಸಾಹಿತ್ಯವಾಗದು.**

ಉದಕದಿಂದ ಮುತ್ತು ಆಗಬೇಕಾದರೆ ಸ್ವಾತಿಮಳೆ ಹನಿ ಬೀಳಬೇಕು. ಅಂದರೆ ಅನುಕೂಲವಾದ ಕಾಲ ಕೂಡಿ ಬರಬೇಕು. ಹಾಗೆ ಶಿವತತ್ತ್ವ ಸಾಧ್ಯವಾಗುವುದಕ್ಕೆ ಗುರು ಕರುಣಿಸಬೇಕು. ಶಿವನೂ ಒಲಿಯಬೇಕು. ಸದ್ಗುರುವಿನ ಕರುಣೆಯಿಲ್ಲದೆ ಚಿತ್ತದಲ್ಲಿ ಪ್ರಾಣಲಿಂಗ ವೇದ್ಯವಾಗುವುದಿಲ್ಲ. ಕೂಡಲಸಂಗನ ದಯೆಯೂ ಮೂಡಿಬರಬೇಕು.

**ಶಿವಕಾರುಣ್ಯ ಕುರಿತು –**

**ನೀನೊಲಿದರೆ ಕೊರಡು ಕೊನರುವುದಯ್ಯಾ**
**ನೀನೊಲಿದರೆ ಬರಡು ಹಯನಹುದಯ್ಯಾ**
**ನೀನೊಲಿದರೆ ವಿಷವೆಲ್ಲ ಅಮೃತವಹುದಯ್ಯಾ**
**ನೀನೊಲಿದರೆ ಸಕಲ ಪಡಿಪದಾರ್ಥ**
**ಇದರಲ್ಲಿರ್ಪುದು ಕೂಡಲಸಂಗಮದೇವಾ.**

ಈ ವಚನದಲ್ಲಿ ಮುಖ್ಯವಾಗಿ ಕಾಣುವುದು ಶಿವನ ಒಲುಮೆ, ನೈಸರ್ಗಿಕ ನಿಯಮಗಳನ್ನು ಕಾರ್ಯಕಾರಣ ಸಂಬಂಧಗಳನ್ನು ಮೀರಿ ಬೆಳೆಯುತ್ತದೆ. ಅಂತರಂಗದ ಅನುಸಂಧಾನದಿಂದ ಎಲ್ಲವನ್ನು ಪರಿಭಾವಿಸಿಕೊಳ್ಳಬೇಕು.

**ಶಿವಚಿಂತೆ ಶಿವಜ್ಞಾನವಿಲ್ಲದ ಮನುಜರು**
**ಸಗಣಿಗೆ ಸಾವಿರ ಹುಳು ಹುಟ್ಟವೆ ದೇವಾ**
**ಕಾಡಮೃಗವೊಂದಾಗಿರಲಾಗದೆ ದೇವಾ**
**ಊರಮೃಗವೊಂದಾಗಿರಲಾಗದೆ ದೇವಾ**
**ನಮ್ಮ ಕೂಡಲಸಂಗನ ಶರಣರಿಲ್ಲದ ಊರು**
**ದೇಶ ವನವಾಸ ನರ ವಿಂಧ್ಯ ಕಾಣಿರಣ್ಣ.**

ಉದಾತ್ತವಾದ ಗುರಿಯಿಲ್ಲದ ಜೀವನ ಕ್ರಿಮಿಕೀಟ, ಕಾಡುಪ್ರಾಣಿಗಳಂತೆ. ಸಗಣಿಯ ಹುಳು ಕ್ಷುದ್ರಭಾವನೆ ಸಂಕೇತ, ಕಾಡುಮೃಗ ಹಿಂಸೆ ಕ್ರೌರ್ಯಗಳ ಸಂಕೇತ.

* "ಜ್ಯೋತಿರ್ಲಿಂಗ", 1ನೇ ತಿರುವು, ಹೈಸ್ಕೂಲ್ ಬಡಾವಣೆ, ಶಿವಮೊಗ್ಗ ರಸ್ತೆ, ಹೊನ್ನಾಳಿ-577217, ದಾವಣಗೆರೆ ಜಿಲ್ಲೆ



ಊರಮೃಗದಲ್ಲಿ ವ್ಯಾಮೋಹವಿದೆ. ಈ ಮೂರು ಗುಣಗಳಿಂದ ಕೂಡಿದ ಜನರಿದ್ದರೆ ಅದು ಊರು ಎನಿಸುವುದಿಲ್ಲ. ಅದು ನರವಿಂಧ್ಯ. ಅದಕ್ಕೆ ಸದ್ಗುಣ ಸದಾಚಾರವುಳ್ಳ ಶಿವಚಿಂತನೆಯಲ್ಲಿದ್ದಾಗ ಅದು ಊರು ಎನಿಸುವುದು.

**ಶಿವಚಿಂತೆ ಶಿವಜ್ಞಾನ ಭ್ರಮೆ ತಿಳಿದವಂಗಲ್ಲದೆ**
**ಆಚಾರ ಶಿವಚಾರ ತಮತಮಗೆ ಸೂರೆಯೆ**
**ಕೂಡಲ ಸಂಗಮದೇವನ ನೆರೆ ಪೂಜಸಿದವಂಗಲ್ಲದೇ?**

ಮನದ ಭ್ರಾಂತಿ ಅಳಿದು ಲಿಂಗವೇ ಘನವೆಂದು ಏಕೈಕ ನಿಷ್ಠೆಯಿಂದ ಅದಕ್ಕೆ ಅರ್ಪಿತವಾದಾಗ 'ಶಿವಚಿಂತೆ ಶಿವಜ್ಞಾನ ಅಳವಡುತ್ತದೆ. ಸದಾಚಾರ, ಶಿವಾಚಾರ, ಶಿವಚಿಂತೆ ಎಂದರೆ ತನ್ಮಯತೆಗಳಿಂದ ಸಾಧನೆ ಪೂರ್ಣವಾಗುತ್ತದೆ.

## ಶಿವದೀಕ್ಷೆ ಬಗ್ಗೆ :

**ಕುಂಬಳ ಕಾಯಿಗೆ ಕಬ್ಬುನದ ಕಟ್ಟ ಕೊಟ್ಟಡೆ**
**ಕೊಳೆವುದಲ್ಲದೆ ಬಲುಹಾಗಬಲ್ಲುದೇ ?**
**ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟಡೆ**
**ಭಕ್ತಿಯೆಂತಹದು ? ಮುನ್ನಿನಂತೆ !**
**ಮನಹೀನನ ಮೀಸಲ ಕಾಯ್ದಿರಿಸಿದಂತೆ !**

ದೀಕ್ಷೆಯ ಮೇಲೆ ನಿಷ್ಠೆಯಿಲ್ಲದವನಿಗೆ ದೀಕ್ಷೆ ಕೊಟ್ಟರೆ ಅವರ ಪಾವಿತ್ರ್ಯ ಉಳಿಸಲಾರ ಎಂಬುದು ಈ ವಚನದ ಭಾವ. ದೀಕ್ಷೆಯಿಂದ ಲಿಂಗಕ್ಕೆ ಮನಸ್ಸು ಮೀಸಲಾಗುತ್ತದೆ. ಈ ಮೀಸಲನ್ನು ಕಾಪಾಡಿಕೊಳ್ಳುವ ನಿಷ್ಠೆಯನ್ನು ಬೆಳೆಸಿ ಲಿಂಗದಲ್ಲಿ ಶ್ರದ್ಧೆ ಬಳಸಿ ದೀಕ್ಷೆ ಮಾಡಬೇಕು.

**ಸಗಣಿಯ ಬೆನಕಂಗೆ ಸಂಪಗೆಯರಳಲ್ಲಿ ಪೂಜಿಸಿದಡೆ**
**ರಂಜನೆಯಿಲ್ಲದೆ ಅದರ ಗಂಜಳ ಬಿಡದಣ್ಣಾ ।**
**ಮಣ್ಣ ಪುತ್ಥಳಿಯ ಮಾಣದೆ ಜಲದಲ್ಲಿ ತೊಳೆದಡೆ**
**ನಿಚ್ಚನಿಚ್ಚ ಕೆಸರಹುದಲ್ಲದೆ ಅದರಚ್ಚುಗ ಬಿಡದಣ್ಣಾ ।**
**ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟಡೆ**
**ಕೆಟ್ಟವನೇಕೆ ಸದ್ಭಕ್ತನಹನು ಕೂಡಲಸಂಗಮದೇವಾ.**

ಮೂಲಭೂತವಾದ ಗುಣಗಳು ಬದಲಾಗದೇ ಇರುವವನಿಗೆ ದೀಕ್ಷೆ ಕೊಡುವುದು ನಿರರ್ಥಕ.

**ಶಿವಜನ್ಮದಲ್ಲಿ ಹುಟ್ಟಿ ಲಿಂಗೈಕ್ಯರಾಗಿ**
**ತಮ್ಮಂಗದ ಮೇಲೆ ಲಿಂಗವಿರುತಿರಲು**
**ಅನ್ಯರನೆ ಹಾಡಿ ಹೊಗಳಿ**
**ಅನ್ಯರ ವಚನವ ಕೊಂಡಾಡಲು ಕರ್ಮ ಬಿಡದು**
**ಭವಬಂಧನ !**
**ಶ್ವಾನಯೋನಿಯಲಿ ಬಪ್ಪುದು ತಪ್ಪದು**
**ಇದು ಕಾರಣ ಕೂಡಲಸಂಗಮದೇವಾ**
**ನಿಮ್ಮ ನಂಬಿಯೂ ನಂಬದ ಥಂಬಿಕರಿಗೆ**
**ಮಳಲ ಗೋಡೆಯನಿಕ್ಕಿ ನೀರಲ್ಲಿ ತೊಳೆದಂತಾಯಿತು.**

ಶಿವಪಥವನ್ನು ಅವಲಂಬಿಸಿದ ಮೇಲೆ ಅದರಲ್ಲಿ ಏಕೈಕ ನಿಷ್ಠೆಯಿಲ್ಲದೆ ಮನಸ್ಸನ್ನು ಹರಿಬಿಡುವ ಡಂಭಕರು ಭವಬಂಧನಕಾರಿಯಾದ ಕರ್ಮಗಳಿಂದ ಮುಕ್ತರಾಗುವುದಿಲ್ಲ. ಅಸ್ಥಿರ ಮನಸ್ಸುಳ್ಳವರು ಶಿವಪಥ ರೂಢಿಸಿಕೊಳ್ಳುವುದು ಸಾಧ್ಯವಿಲ್ಲ.

## ಶಿವಭಕ್ತಿ :

**ಎಂತು ಶಿವಭಕ್ತಿಯ ನಾನುಪಮಿಸುವೆನಯ್ಯಾ**
**ಎಂತು ಶಿವಾಚಾರವೆನಗೆ ವೇದ್ಯವಪ್ಪುದಯ್ಯಾ**
**ಕ್ರಾಮ ಕ್ರೋಧ ಮೋಹ ಮದ ಮತ್ಸರದಿಂದ ಕಟ್ಟು ವಡೆದೆನು**
**ಹಸಿವು ತೃಷೆ ವ್ಯಸನದಿಂದ ಕುದಿಯುತ್ತಿದ್ದೇನೆ**
**ಪಂಚೇಂದ್ರಿಯ ಸಪ್ತಧಾತು**
**ಹರಿಹಂಚುಮಾಡಿ ಕಾಡಿಹವಯ್ಯಾ**
**ಅಯ್ಯಾ ಎನ್ನ ಹುಯ್ಯಲ ಕೇಳಯ್ಯ**
**ಕೂಡಲಸಂಗಮದೇವಾ ನಾನೇವೆನೆವೆನಯ್ಯಾ.**

ಸಾಧನೆಯ ಪ್ರತಿಕೂಲ ಸ್ಥಿತಿಯಲ್ಲಿ ಶಿವಭಕ್ತಿಯನ್ನು ಅಳವಡಿಸಿಕೊಂಡು ಶಿವಾಚಾರವನ್ನು ಸಾಧ್ಯವಾಗಿಸುವ ಮತ್ತು ವೇದ್ಯವಾಗಿಸುವ ತೀವ್ರ ಹಂಬಲ ಈ ವಚನದಲ್ಲಿ ಕಾಣುತ್ತದೆ. ಇಲ್ಲಿ ಶಿವಭಕ್ತಿಯ ತೀವ್ರತೆ, ಶ್ರದ್ಧೆ ಹಂಬಲಗಳು ಕಾಣುತ್ತವೆ.



ದೂಷಕವನೊಬ್ಬ ದೇಶವ ಕೊಟ್ಟಡೆ
ಆಶೆ ಮಾಡಿ ಅವನ ಹೊರೆಯಲಿರಬೇಡ
ಮಾದಾರ ಶಿವಭಕ್ತನಾದೊಡೆ
ಆತನ ಹೊರೆಯಲ್ಲಿ ಭೃತ್ಯನಾಗಿಪ್ಪುದು ಕರಲೇಸಯ್ಯಾ
ತೊತ್ತಾಗಿಪ್ಪುದು ಕರಲೇಸಯ್ಯಾ
ಕಾಡಸೊಪ್ಪು ತಂದು ಓಡಿನಲ್ಲಿ ಹುರಿದಿಟ್ಟು
ಕೂಡಿಕೊಂಡಿಪ್ಪುದು ನಮ್ಮ ಕೂಡಲಸಂಗನ ಶರಣರ.

ಓರ್ವ ಧರ್ಮನಿಂದಕ ದೈವದೂಷಕ ದೇಶವನ್ನೇ ಕೊಡುತ್ತೇನೆಂದರೆ ಆಸೆ ಮಾಡಿ ಆತನ ಬಳಿ ಸಾರಬಾರದು. ಮಾದಾರ ಚನ್ನಯ್ಯನ ಬಳಿ ತೊತ್ತಾಗಿ ಸೇವೆ ಮಾಡುವುದು ಶ್ರೇಯಸ್ಕರ. ಕಾಡಸೊಪ್ಪನ್ನಾದರೂ ತಿಂದು ಶರಣರೊಡನೆ ಸಂಗ ಮಾಡುವುದು ಭಕ್ತಿಯ ಪರಾಕಾಷ್ಠೆ. ಇದು ಲೌಕಿಕ ಇತಿಮಿತಿಗಳನ್ನು ಮೀರಿದ್ದು.

**ಶಿವಾಲಯ :**

ಉಳ್ಳವರು ಶಿವಾಲಯವ ಮಾಡುವರು
ನಾನೇನು ಮಾಡುವೆ ಬಡವನಯ್ಯಾ
ಎನ್ನ ಕಾಲೇ ಕಂಬ ದೇಹವೇ ದೇಗುಲ
ಶಿರವೇ ಹೊನ್ನ ಕಲಶವಯ್ಯಾ
ಕೂಡಲಸಂಗಮದೇವಾ ಕೇಳಯ್ಯಾ
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲಾ.

ಸ್ಥಾವರ ದೇವಾಲಯಗಳ ನಿರಾಕರಣೆ ಈ ವಚನದಲ್ಲಿದೆ. ಎನ್ನ ಕಾಲೇ ಕಂಬ, ದೇಹವೇ ದೇಗುಲ, ಶಿರವೇ ಹೊನ್ನ ಕಳಶದಿಂದ ಇಡೀ ದೇಹವೇ ಜಂಗಮ ದೇವಾಲಯ. ಆದರ ಮುಂದಿನ ಮಾತು ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲಾ ಈ ಮಾತು ದೇಹ ಅಶಾಶ್ವತ. ಇದರ ಒಳಗಿರುವ ಚೈತನ್ಯ, ಈ ಗುಡಿಯ ಒಳಗಿರುವ ಒಡೆಯ ಅವನು ಶಾಶ್ವತ. ಈ ಶಾಶ್ವತ ತತ್ತ್ವಕ್ಕೆ ಅಳಿವಿಲ್ಲ.

**ಶಿವರಾತ್ರಿ :**

ಅಚ್ಚಿಗವೇಕಯ್ಯಾ ಸಂಸಾರದೊಳಗ ?
ನಿಚ್ಚ ನಿಚ್ಚ ಶಿವರಾತ್ರಿಯ ಮಾಡುವುದು ?
ಬೇಗ ಬೇಗ ಅರ್ಚನೆ-ಪೂಜನೆಯ ಮಾಡುವುದು
ಕೂಡಲಸಂಗನ ಕೂಡುವುದು.

ಸಂಸಾರ ವ್ಯಾಮೋಹ ತ್ಯಜಿಸಿ, ನಿತ್ಯ ಶಿವಾರ್ಚನೆ ಮಾಡಿ ಸಾಧನೆಯಲ್ಲಿ ತೊಡಗಬೇಕು ಎಂಬ ನಿರಂತರ ಜಾಗೃತಭಾವ ಇಲ್ಲಿದೆ.

ಶರಣ ನಿದ್ರೆಗೈದಡೆ ಜಪ ಕಾಣಿರೋ
ಶರಣನೆದ್ದು ಕುಳಿತಡೆ ಶಿವರಾತ್ರಿ ಕಾಣಿರೋ
ಶರಣರ ನಡೆದುದೆ ಪಾವನ ಕಾಣಿರೋ
ಶರಣ ನುಡಿದುದೇ ಶಿವತತ್ತ್ವ ಕಾಣಿರೋ
ಕೂಡಲಸಂಗನ ಶರಣರ
ಕಾಯವೇ ಕೈಲಾಸ ಕಾಣಿರೋ.

ಶರಣ ಪರಂಜ್ಯೋತಿ ಸ್ವರೂಪನಾದುದರಿಂದ ಆತನ ಕ್ರಿಯೆಗಳು ಶಿವಬೆಳಕನ್ನು ತೋರುತ್ತವೆ. ಆತ ನಿದ್ದೆ ಮಾಡಿದರೆ ಅದೇ ಜಪ, ಆತ ಎಚ್ಚರವಾದರೆ ಅದೇ ಜಾಗರಣೆ. ಆತ ನಡೆದುದೇ ಪಾವನ. ಆತ ನುಡಿದುದೇ ಶಿವತತ್ತ್ವ ಆತನ ದೇಹವೇ ಕೈಲಾಸ. ಲಿಂಗಾಂಗ ಸಾಮರಸ್ಯನಾದುದರಿಂದ ಅದನ್ನು ಬಿಟ್ಟು ಬೇರೇನನ್ನು ಕಾಣಲಾಗುವುದಿಲ್ಲ.

**ಶಿವಭಕ್ತ :**

ಕೆಡೆ ನುಡಿಯದೆ ಕೆಡೆ ನಡೆಯದೆ ಅನ್ಯರ ಪ್ರತಿಪಾದಿಸೆ
ಏನ ಮಾಡನಯ್ಯಾ ಲಿಂಗವು ಏನ ಕೊಡನಯ್ಯಾ ಲಿಂಗವು
ತಾನು ಏನ ಬೇಡಿದುದನೀವಗಾಗಿ ನಂಬುಗೆಯುಳ್ಳ
ಶಿವಭಕ್ತರಿಗೆ ಇದೇ ದಿಬ್ಯ ಕೂಡಲಸಂಗಮದೇವಾ.

ನಡೆನುಡಿಗಳಲ್ಲಿ ಕೆಡಕು ಇರಬಾರದು. ಬೇರೆಯವರನ್ನು ದೂಷಿಸಿ ವಿಮರ್ಶಿಸಬಾರದು. ಅದನ್ನು ಬಿಟ್ಟು ಐಕ್ಯ ನಿಷ್ಠೆಯಿಂದ ತನ್ನನ್ನು ತಾನು ವಿಮರ್ಶಿಸುತ್ತಾ ಶಿವನನ್ನು ನಂಬಿದರೆ ಅಂತಹ ಭಕ್ತನಿಗೆ ಆತ ಏನನ್ನಾದರೂ ಕೊಡುತ್ತಾನೆ.

ಕೆಂಡದಲ್ಲಿಟ್ಟಡೆ ಮೆಯ್ಬೆಂದುದೆಂಬರು
ಕೊಂಡಿಟ್ಟವನ ಕೈ ಮುನ್ನವೇ ಬೆಂದುದು
ನೊಂದೆ ನಾನು ನೊಂದೆನಯ್ಯಾ ಬೆಂದೆ ನಾನು
ಬೆಂದೆನಯ್ಯಾ
ಕೂಡಲ ಸಂಗನ ಶರಣರ ಕಂಡು ಕಾಣದಂತಿದ್ದಡೆ
ನಾನೊಂದೆ ಬೆಂದೆನಯ್ಯಾ.

ಯಾರ ಮೇಲಾದರೂ ಕೆಂಡವನ್ನೆತ್ತಿ ಎಸೆದರೆ ಅದು ಮೊದಲು ಸುಡುವುದು ಎಸೆಯುತ್ತಿರುವವರನ್ನು. ಹಾಗೆ ಶರಣರನ್ನು ಕಂಡೂ ಕಾಣದಂತೆ ಉಪೇಕ್ಷಿಸಿದರೆ ಆ ಉಪೇಕ್ಷೆ ಎಂಬ ಅಗ್ನಿಯಲ್ಲಿ ನಾವು ಮೊದಲು ಬೇಯುತ್ತೇವೆ. ಶರಣರ ಉದಾಸೀನ ಮಾಡಿದರೆ ನೊಂದೆನಯ್ಯಾ ಬೆಂದೆನಯ್ಯಾ ಎನ್ನುವರು.



"ಶಿವಭಕ್ತನಾಗಿ ಭಕ್ತಿಪಕ್ವವಿಲ್ಲದಿದ್ದಡೆ ಕಾಗೆ ಕೋಳಿಯಿಂದ ಕರಕಷ್ಟ ಕೂಡಲಸಂಗಮದೇವಾ" ಈ ವಾಕ್ಯದಲ್ಲಿ ಭಕ್ತನು ಇತರ ಭಕ್ತರೊಡನೆ ಹಂಚಿಕೊಳ್ಳದಿದ್ದರೆ ಕಾಗೆ ಕೋಳಿಗಿಂತ ಕೀಳಾಗುತ್ತಾನೆ. ಅಂದರೆ ಭಕ್ತರೇ ತನ್ನ ಬಳಗವೆಂಬ ಮಾನವೀಯ ಗುಣ ಇರಬೇಕು.

ಆದ್ಯರಿಗಲ್ಲದೆ ವೇದ್ಯವಾಗದು । ಮಾಣಿಭೋ ।
ಶಿವಭಕ್ತನೇ ಕುಲಜ
ಕೈವರ್ತಗರ್ಭಸಂಭೂತ ಮಾರ್ಕಂಡೇಯ ಮಹಾಮುನೇಃ
ತಪಸಾ ಜಾಯತೇ ವಿಪ್ರಕುಲಂ ಜಾತಿರ್ನವಿದ್ಯತೇ ॥
ಜಾತನಲ್ಲ ಅಜಾತನಲ್ಲ
ಕೂಡಲ ಸಂಗನ ಶರಣರು ನಿಸ್ಸೀಮರಯ್ಯಾ ॥

ಭಕ್ತರಲ್ಲಿ ಜಾತಿಭೇದ ಕೂಡದು. ಹಿಂದಿನ ಅನೇಕ ಸಾಧಕರು ಋಷಿಗಳು ಸಾಧನೆಯಿಂದ ದೊಡ್ಡವರಾದರೇ ಹೊರತು ಜಾತಿಯಿಂದಲ್ಲ. ಅದಕ್ಕೆ ಬೆಸ್ತ ಸಂಜಾತ ಮಾರ್ಕಂಡೇಯ ಮುನಿ ಉದಾಹರಣೆ ಕೊಡುವರು. ಶಿವಭಕ್ತರಿಗೆ ಜಾತಿಯಿಲ್ಲ. ಜಾತಿ-ಮಿತಿಗಳ ಮೀರಿ ನಿಂತ ನಿಸ್ಸೀಮರು ಎಂದು ಅವರ ಹಿರಿಮೆ ಹೇಳುತ್ತಾರೆ. ಹೀಗೆ ಶಿವನೊಲುಮೆಯ ಕಾರುಣ್ಯವನ್ನು ಬಸವಣ್ಣನವರ ವಚನಗಳಲ್ಲಿ ಕಾಣುತ್ತೇವೆ.

## ಸುದ್ದಿಚಿತ್ರ

ಎಲ್ಲಾ ಪ್ರದೇಶಗಳಿಗೂ ಹೊಂದಿಕೆ ಆಗುವಂತಹ ವಾಹನವನ್ನು ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಮೆಕ್ಯಾನಿಕಲ್ ವಿಭಾಗದ ವಿದ್ಯಾರ್ಥಿಗಳು ವಿನ್ಯಾಸಗೊಳಿಸಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಮುಂದೆ ಪ್ರಾತ್ಯಕ್ಷಿತೆಗೊಳಿಸಿದರು. ಈ ಸಂದರ್ಭದಲ್ಲಿ ವಿಭಾಗದ ಮುಖ್ಯಸ್ಥರು, ಅಧ್ಯಾಪಕರು ಹಾಗೂ ವಿದ್ಯಾರ್ಥಿಗಳು ಉಪಸ್ಥಿತರಿದ್ದರು.

## ಶ್ರದ್ಧಾಂಜಲಿ

### ವಿದ್ವಾನ್ ಶ್ರೀ ಕೆ.ಎಸ್. ಶಿವನಂಜಯ್ಯನವರು

ಶ್ರೀ ಸಿದ್ಧಗಂಗಾ ಸಂಸ್ಕೃತ ಮಹಾವಿದ್ಯಾಲಯದಲ್ಲಿ ಹಿರಿಯ ಸಂಸ್ಕೃತ ಪ್ರಾಧ್ಯಾಪಕರಾಗಿ, ಶ್ರೀಮಠದ ವ್ಯವಸ್ಥಾಪಕರಾಗಿ ಅನುಪಮ ಸೇವೆ ಸಲ್ಲಿಸಿದ ವಿದ್ವಾನ್ ಶ್ರೀ ಕೆ.ಎಸ್. ಶಿವನಂಜಯ್ಯನವರು ೮೯ ವರ್ಷಗಳ ಸಾರ್ಥಕ ಜೀವನ ನಡೆಸಿ ಜನವರಿ ೨೭ ರಂದು ನಿಧನ ರಾದರೆಂದು ತಿಳಿಸಲು 'ಸಿದ್ಧಗಂಗಾ' ವಿಷಾದಿಸುತ್ತದೆ.

ಶ್ರೀಯುತರು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪರಮ ಭಕ್ತರಾಗಿದ್ದರು. ಪ್ರತಿಭಾವಂತ ಸಂಸ್ಕೃತ ಪ್ರಾಧ್ಯಾಪಕ ರಾಗಿದ್ದ ಶ್ರೀ ಶಿವನಂಜಯ್ಯನವರ ಅಮೂಲ್ಯ ಸೇವೆಗೆ ವೇದವಿದ್ವಾನ ಪ್ರಶಸ್ತಿ 'ಗುರುಭಕ್ತ ರತ್ನ' ಮೊದಲಾದ ಪ್ರಶಸ್ತಿಗಳಿಗೆ ಭಾಜನರಾಗಿದ್ದರು. ಸಾರ್ವಜನಿಕ ಕ್ಷೇತ್ರದಲ್ಲಿಯೂ ಗುರುತಿಸಿಕೊಂಡಿದ್ದ ಶ್ರೀಯುತರು ತುಮಕೂರು ತಾಲ್ಲೂಕು ಬೋರ್ಡ್ ಸದಸ್ಯರಾಗಿ, ಉಪಾಧ್ಯಕ್ಷರಾಗಿ, ಬೆಂಗಳೂರು ಕಲ್ಯಾಣ ಕೋ.ಆಪರೇಟಿವ್ ಸೊಸೈಟಿ ಹಾಗೂ ಸಿದ್ಧಗಂಗಾ ಅರ್ಬನ್ ಕೋ.ಆಪರೇಟಿವ್ ಬ್ಯಾಂಕ್ ನಿರ್ದೇಶಕರಾಗಿ, ರೈಲ್ವೆ ಮಂಡಲಿಯ ಸದಸ್ಯರಾಗಿ, ದೇವರಾಯಪಟ್ಟಣದ ಗ್ರಾಮ ಪಂಚಾಯಿತಿ ಅಧ್ಯಕ್ಷರಾಗಿ ವಿಶಿಷ್ಟ ಸೇವೆಯನ್ನು ಸಲ್ಲಿಸಿದ್ದರು.

ಯಾವುದೇ ಸಭೆ ಸಮಾರಂಭ, ವಿವಾಹಾದಿ ಶುಭಮಂಗಳ ಸಂದರ್ಭದಲ್ಲಿ ಅಯಾಚಿತವಾಗಿ ವೇದಪಠಣ ಮುಖಿಗಳಾಗಿ ಘಂಟೆ ಮೊಳಗುವಂತೆ ಧ್ವನಿಯೇರಿಸಿ ಹಾಡುತ್ತಿದ್ದ ಶ್ರೀ ಶಿವನಂಜಯ್ಯನವರು ವಿಶಿಷ್ಟ ವ್ಯಕ್ತಿತ್ವವುಳ್ಳವ ರಾಗಿದ್ದರು.

ಶ್ರೀ ಸಿದ್ಧಗಂಗಾ ಗುರು ಪರಂಪರೆ ಅವರ ಆತ್ಮಕ್ಕೆ ಶಾಂತಿಯನ್ನು, ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಕುಟುಂಬ ವರ್ಗಕ್ಕೆ ದಯಪಾಲಿಸಲಿ ಎಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.







ಲೇಖನ

# ದೇಶದ ಬೆನ್ನೆಲುಬು ರೈತ



– ಆರ್.ಎಸ್. ಚಾಪಗಾವಿ *

'ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು" ಎಂಬ ಒಂದು ಗಾದೆ ಇದೆ. ಇಂದಿನ ಕಂಪ್ಯೂಟರ್ ಯುಗದಲ್ಲೂ ಇದು ಪ್ರಸ್ತುತವಿದೆ. ಮಾನವ ಜೀವನಕ್ಕೆ ಮುಖ್ಯವಾಗಿ ಬೇಕಾದುದು ಆಹಾರ. ಆಹಾರ ಉತ್ಪಾದನೆಗೆ ಮೇಟಿ ವಿದ್ಯೆ ಬೇಕೇ ಬೇಕು. ಮೇಟಿ ಕಾಯಕ ನಡೆಯಬೇಕು. ಮೇಟಿ ಕಾಯಕ ಮಾಡುವ ರೈತನನ್ನು ನಾವು ಅನ್ನದಾತನೆಂದೂ ನಮ್ಮನ್ನು ಸಲುಹುವ ಪುಣ್ಯವಂತನಂದೂ ಕರೆದಿದ್ದೇವೆ. ಅವನನ್ನು ಹಾಡಿ ಹೊಗಳಿದ್ದೇವೆ. ರೈತನ ಬಗ್ಗೆ ಕವನ ಬರೆಯದ ಕವಿಯಿಲ್ಲ. ಆತನ ಬಗ್ಗೆ ಮೊಸಳೆ ಕಣ್ಣೀರು ಸುರಿಸದ ರಾಜಕಾರಣಿಯಿಲ್ಲ. ರೈತನು ಒಬ್ಬ ಕಾಯಕ ಜೀವಿ. ಉರಿವ ಬಿಸಿಲಲ್ಲಿ; ಕೊರೆವ ಚಳಿಯಲ್ಲಿ; ಸುರಿವ ಮಳೆಯಲ್ಲಿ ಕೆಸರು ಗದ್ದೆಗಳಲ್ಲಿ ತಗ್ಗು ದಿಣ್ಣೆ ಮುಳ್ಳುಗಂಟಿಗಳಲ್ಲಿ ರಾತ್ರಿ ಹಗಲು ಬೆವರು ಸುರಿಸಿ ದುಡಿಯುತ್ತಾನೆ. ಆತನ ನಮ್ಮ ರಾಷ್ಟ್ರದ ಬೆನ್ನೆಲುಬಾಗಿದ್ದಾನೆ. ಹಿಂದಿನ ಪ್ರಧಾನಿ ಲಾಲ್ ಬಹದ್ದೂರ್ ಶಾಸ್ತ್ರೀಯವರು 'ಜೈ ಜವಾನ, ಜೈ ಕಿಸಾನ' ಘೋಷಣೆಯನ್ನೇ ತಂದರು. ರೈತ ಬೆಳೆದ ಬೆಳೆಗೆ ಮಾತ್ರ ನಾವು ವಾರಸುದಾರರಾಗಿದ್ದೇವೆಯೇ ಹೊರತು ಆತನ ಕಷ್ಟ ಅನುವು ಆಪತ್ತುಗಳಲ್ಲಿ ಮಾತ್ರ ಭಾಗಿಯಾಗಿರುವುದಿಲ್ಲ. 'ಆರಂಭವ ಮಾಡುವೆನಯ್ಯಾ ಗುರುಪೂಜೆಗೆಂದು' ಎಂದು ಹೇಳಿ ಬಸವಣ್ಣನವರು ಕೃಷಿ ಕಾಯಕವನ್ನು ಗುರುಪೂಜೆಗೆ ಹೋಲಿಸಿದ್ದಾರೆ. ಪ್ರತಿ ವರ್ಷ ಎಳ್ಳ ಅಮಾವಾಸ್ಯೆಯ ದಿನದಂದು ಬಸವಕಾಲೀನ ಶ್ರೇಷ್ಠ ಶರಣನಾಗಿದ್ದ ಒಕ್ಕಲಿಗ ಮುದ್ದಣ್ಣನ ಜಯಂತಿ ಆಚರಿಸಲಾಗುತ್ತದೆ.

ದೇಶ ಸ್ವಾತಂತ್ರ್ಯಾ ನಂತರ ನಮ್ಮ ಸರಕಾರ ಕೃಷಿ ಸುಧಾರಣೆಗೆ ಸಾಕಷ್ಟು ಸಂಶೋಧನೆಗಳನ್ನು ಕೈಗೊಳ್ಳಲಿಲ್ಲ. ಪ್ರಗತಿ ಸಾಧಿಸಲಿಲ್ಲ. ಬೆಳೆಯುತ್ತಿರುವ ಜನಸಂಖ್ಯೆಗನುಗುಣವಾಗಿ ಕೃಷಿ ಉತ್ಪನ್ನ ಹೆಚ್ಚಲಿಲ್ಲ. ೧೯೬೦ರ ದಶಕದಲ್ಲಿ ದೇಶದಲ್ಲಿ ಆಹಾರದ ಕೊರತೆ ಉಂಟಾಗಿ ಅಮೇರಿಕ ಮತ್ತಿತರ ದೇಶಗಳಿಂದ ಭಿಕ್ಷೆ ಬೇಡಿ ಸರಕಾರ ಆಹಾರ ಧಾನ್ಯ ಆಮದು ಮಾಡಿಕೊಂಡಿತು. ಇದರೊಂದಿಗೆ ಹೊಸ ಹೊಸ ರೋಗಾಣುಗಳೂ ಪಾರ್ಥೇನಿಯಂ ಕಸವೂ ದೇಶವನ್ನು ಪ್ರವೇಶಿಸಿತು. ದೇಶಿ ಕೃಷಿ ಪದ್ಧತಿ ಸುಧಾರಣೆ ಬೆಳವಣಿಗೆ ಕುರಿತು ಹಿಂದಿನ ಶತಮಾನದಲ್ಲಿ ಘನಮಠ ಶಿವಯೋಗಿಗಳು ಅತ್ಯುತ್ತಮವಾದ 'ಕೃಷಿ ಜ್ಞಾನ ಪ್ರದೀಪಿಕೆ' ಗ್ರಂಥ ರಚಿಸಿದ್ದರು. ಸರಕಾರ ಆದರ ಉಪಯೋಗ ತೆಗೆದುಕೊಳ್ಳದೆ ಕೃಷಿ ಸುಧಾರಣೆಗೆ ಪಾಶ್ಚಾತ್ಯದತ್ತ ಮುಖ ಮಾಡಿತು. ಕೃಷಿ ಸಂಪತ್ತು ಹೆಚ್ಚಿಸಲು ವಿದೇಶಿ ನೀತಿಯನ್ನು ಅನುಸರಿಸಿತು. ಸಾವಯವ ಕೃಷಿ ಪದ್ಧತಿಯಿಂದ ಮೊದಲು ನಮ್ಮ ರೈತ ಮುತ್ತಿನಂತಹ ಜೋಳ, ಹವಳದಂತಹ ಗೋಧಿ ಬಂಗಾರ ಕಡ್ಡಿಯಂತಹ ಭತ್ತ ಬೆಳೆಯುತ್ತಿದ್ದ. ಹಣ್ಣು ಕಾಯಿ ಪಲ್ಯೆ ಸತ್ವಯುತವಾಗಿರುತ್ತಿದ್ದವು. ದೇಶಿ ಆಕಳು ಎಮ್ಮೆಗಳ ಹಾಲು ಪೌಷ್ಟಿಕವೂ ರುಚಿಕರವೂ ಆಗಿರುತ್ತಿತ್ತು. ಆದರೆ




* ರಾಮತೀರ್ಥ ನಗರ, ಬೆಳಗಾವಿ. ಮೊ : ೯೪೮೦೪ ೫೫೧೪೬









ಸರಕಾರದ ತಪ್ಪು ನೀತಿಯಿಂದ ಇದನ್ನೆಲ್ಲ ಕಳೆದುಕೊಳ್ಳಬೇಕಾಯಿತು. ಶೀಘ್ರ ಹಾಗೂ ಹೆಚ್ಚು ಉತ್ಪಾದನೆಗಾಗಿ ವಿದೇಶಗಳಿಂದ ಹೈಬ್ರೀಡ ಬೀಜ ತರಿಸಲಾಯಿತು. ಜೊತೆಗೆ ರಾಸಾಯನಿಕ ಗೊಬ್ಬರ ಕ್ರಿಮಿನಾಶಕ ಔಷಧಗಳ ಆಮದು ನಡೆಯಿತು. ಹೆಚ್ಚು ಇಳುವರಿ ಪಡೆದು ದಿಢೀರ್ ಶ್ರೀಮಂತನಾಗುವ ಕನಸು ಕಾಣುತ್ತ ನಮ್ಮ ರೈತ ವಿದೇಶಿ ಗೊಬ್ಬರ ಕ್ರಿಮಿನಾಶಕಗಳನ್ನು ಅಧಿಕವಾಗಿ ಉಪಯೋಗಿಸಿದ ಪರಿಣಾಮವಾಗಿ ಭೂಮಿ ಬರಡಾಗ ತೊಡಗಿತು. ಸಾಂಪ್ರದಾಯಿಕ ಕೃಷಿ ಪದ್ಧತಿ ನಾಶವಾಯಿತು. ಮಾರಕ ಕ್ರಿಮಿನಾಶಕಗಳಾದ ಡಿಡಿಟಿ, ಎಂಡೋಸಲ್ಫಾನ್‌ಗಳ ಉಪಯೋಗದಿಂದ ರೈತರ, ಜನರ ಆರೋಗ್ಯ ಕ್ಷೀಣಿಸಿತು. ಸರಕಾರದ ಈ ಕುರುಡು ನೀತಿಯಿಂದ ವಿದೇಶಿ ಕಂಪನಿಗಳು ಬೆಳೆದು ಶ್ರೀಮಂತವಾದವು. ನಮ್ಮ ದುಡಿಯುವ ರೈತನ ಸ್ಥಿತಿ ಪಾತಾಳ ಕಂಡಿತು. ದೇಶಿ ಬೀಜದ ತಳಿ ನಾಶವಾಯಿತು. ಕಾಮಧೇನು ಎನಿಸಿದ ದೇಶೀ ಹಸುಗಳ ಸಂತತಿ ಕ್ಷೀಣಿಸಿತು.

ಸರಕಾರ ರೈತರಿಗಾಗಿ ಯೋಜನೆಗಳನ್ನು ತರುತ್ತಿದ್ದರೂ ಬೀಜ ಗೊಬ್ಬರ ಧನ ಸಹಾಯ ಘೋಷಿಸುತ್ತಿದ್ದರೂ ಅದು ಸರಿಯಾಗಿ ರೈತರ ಕೈ ಸೇರುತ್ತಿಲ್ಲ. ಕಂಪನಿಗಳು ಉದ್ಯಮಿಗಳು ತಮ್ಮ ಉತ್ಪಾದನೆಗೆ ತಮ್ಮದೇ ಬೆಲೆ ನಿಗದಿ ಮಾಡುತ್ತಾರೆ. ಆದರೆ ರೈತನ ಬೆಳೆಗೆ ಬೆಲೆ ನಿಗದಿ ಮಾಡುವುದು ಆತನ ಕೈಯಲ್ಲಿಲ್ಲ. ವ್ಯಾಪಾರಿಗಳು ದಳ್ಳಾಳಿಗಳ ಕೈಯಲ್ಲಿ ರೈತ ಒದ್ದಾಡುತ್ತಿದ್ದಾನೆ. ಆತನ ಉತ್ಪಾದನೆಗಳಿಗೆ ಯೋಗ್ಯ ಬೆಲೆ ಸಿಗದೆ ಸರಿಯಾದ ಮಾರುಕಟ್ಟೆ ಇಲ್ಲದೆ ಪರದಾಡುತ್ತಿದ್ದಾನೆ. ಸಾಲ ಸೋಲ ಮಾಡಿ ಆತ್ಮಹತ್ಯೆಗೆ ಶರಣಾಗುತ್ತಿದ್ದಾನೆ. ಕಬ್ಬಿನ ಬೆಳೆಯನ್ನೇ ತೆಗೆದುಕೊಳ್ಳಿ, ಕಬ್ಬಿಗೆ ಸರಿಯಾದ ಬೆಲೆ ಸಿಗುವುದು ಒತ್ತಟ್ಟಿಗಿರಲಿ ಆತ ಬೆಳೆದ ಕಬ್ಬಿನ ಬೆಳೆಗೆ ಖರ್ಚು ಮಾಡುವಷ್ಟು ಹಣವನ್ನು ಕಬ್ಬನ್ನು ಫ್ಯಾಕ್ಟರಿಗೆ ಕಳಿಸುವುದಕ್ಕಾಗಿ ವ್ಯಯಿಸಬೇಕಾಗಿದೆ. ಸ್ಲಿಪ್ ಬಾಯ್ ಮೊದಲ್ಗೊಂಡು ಕೇನ ಇನ್‌ಸ್ಪೆಕ್ಟರ್, ಡ್ರಾಯವರ್, ಗಾಡಿ ಮಾಲೀಕರು, ಕೂಲಿಕಾರರು ಆತನನ್ನು ಮನ ಬಂದಂತೆ ಸುಲಿಯುತ್ತಾರೆ. ಮುಂಧೋರಣೆ ಇಲ್ಲದ ಹೊಣೆಗೇಡಿ ಸರಕಾರ ಬಿ.ಪಿ.ಎಲ್. ಕಾರ್ಡುದಾರರಿಗೆ ಅಲ್ಪ ಬೆಲೆಯಲ್ಲಿ ಅಕ್ಕಿ ಮತ್ತು ಅಗತ್ಯ ವಸ್ತುಗಳನ್ನು ಪೂರೈಸುತ್ತಿರುವುದರಿಂದ ಕೂಲಿಕಾರರಲ್ಲಿ ದುಡಿಯುವ ಪ್ರವೃತ್ತಿ ಹೋಗಿಬಿಟ್ಟಿದೆ. ರೈತರಿಗೆ ಕೂಲಿಕಾರರೇ ಸಿಗುತ್ತಿಲ್ಲ. ಸಿಕ್ಕರೂ ದುಪ್ಪಟ್ಟು ತೆರಬೇಕಾಗುತ್ತಿದೆ. ಹೀಗಾಗಿ ರೈತ ದಿವಾಳಿ ಸ್ಥಿತಿಗೆ ಬಂದು ತಲುಪಿದ್ದಾನೆ.

೧೯೮೦ರ ದಶಕದಲ್ಲಿ ರೈತ ಸಂಘಟನೆ ಹುಟ್ಟಿ ತನ್ನ ವೈಭವ ಮೆರೆಯಿತು. ಬಾಯಿ ಸತ್ತ ರೈತರಿಗೆ ಧ್ವನಿ ನೀಡಿತು. ರೈತ ತನ್ನ ಹಕ್ಕುಗಳ ಬಗ್ಗೆ ತಿಳಿದುಕೊಂಡ. ಅವುಗಳನ್ನು ಪಡೆಯಲು ಹೋರಾಟದಲ್ಲಿ ತೊಡಗಿದ. ಆದರೆ ರೈತ ಸಂಘಟನೆ ರಾಜಕೀಯ ಸೇರಿದುದರಿಂದ ಮುಗ್ಗರಿಸುತ್ತ ಬಂತು. ಕೃಷಿಯಲ್ಲಿ ಸುಧಾರಣೆ ಪ್ರಗತಿಗೆ ವಿದೇಶಗಳನ್ನು ಅವಲಂಬಿಸಿದ ಸರಕಾರ 'ಕೆಟ್ಟ ಮೇಲೆ ಬುದ್ಧಿ ಬಂತು' ಎಂಬಂತೆ ಈಗ ದೇಶಿ ಸಾವಯವ ಕೃಷಿ ಪದ್ಧತಿ ಪ್ರೋತ್ಸಾಹಿಸಲು ಚಿಂತಿಸುತ್ತಿದೆ. ಇದು ಸ್ವಾಗತಾರ್ಹ ಬೆಳವಣಿಗೆ. ಸಾವಯವ ದೇಶೀ ಕೃಷಿ ಪದ್ಧತಿ ಜಾರಿಯೊಂದಿಗೆ ನಮ್ಮ ಸರಕಾರ ಮತ್ತು ವಿಶ್ವವಿದ್ಯಾಲಯಗಳು ಹೊಸ ಹೊಸ ಸಂಶೋಧನೆ ಕೈಗೊಳ್ಳಬೇಕು. ಮಾರುಕಟ್ಟೆ ನೀತಿ ಸುಧಾರಿಸಬೇಕು, ದೇಶದ ಬೆನ್ನೆಲುಬಾದ ರೈತಾಪಿ ವರ್ಗದ ಅಭಿವೃದ್ಧಿಗೆ ಹೆಚ್ಚು ಒತ್ತು ಕೊಡಬೇಕು.







ಕ್ಷೇತ್ರವಾರ್ತೆ

# ವೃತ್ತಿ ಉನ್ನತಿ ಕಾರ್ಯಾಗಾರ

ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ (ರಿ.,) ಶ್ರೀ ಸಿದ್ಧಗಂಗಾ ಮಠದ ವತಿಯಿಂದ ಜನವರಿ ೨೧ನೇ ಭಾನುವಾರ ಬೆಳಿಗ್ಗೆ ೯ ರಿಂದ ಸಂಜೆ ೫ ರವರೆಗೆ ಒಂದು ದಿನದ 'ವೃತ್ತಿ ಉನ್ನತಿ ಕಾರ್ಯಾಗಾರ' ವನ್ನು ಎಲ್ಲಾ ಪ್ರಾಥಮಿಕ ಮತ್ತು ಪ್ರೌಢಶಾಲಾ ಶಿಕ್ಷಕರಿಗೆ 'ಬಿರ್ಲಾ ಸಭಾಂಗಣ' ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯ ತುಮಕೂರು ಇಲ್ಲಿ ಏರ್ಪಡಿಸಲಾಗಿತ್ತು. ಈ ಕಾರ್ಯಾಗಾರದಲ್ಲಿ ಸಂಪನ್ಮೂಲ ವ್ಯಕ್ತಿಗಳಾಗಿ ಖ್ಯಾತ ಅಂತರಾಷ್ಟ್ರೀಯ ಶಿಕ್ಷಣ ತಜ್ಞರಾದ ಡಾ॥ ಗುರುರಾಜ ಕರಜಗಿ, ಶ್ರೀ ವಿವೇಕಾನಂದ, ಸುನೀತಾ ಫಡ್ನೀಸ್, ಡಾ॥ ನಿರಂಜನ ಆರಾಧ್ಯ ಮೊದಲಾದವರು ಭಾಗವಹಿಸಿದ್ದರು.

ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮೀಜಿಯವರು ಕಾರ್ಯಾಗಾರ ಉದ್ಘಾಟಿಸಿ ತಮ್ಮ ಆಶೀರ್ವಚನದಲ್ಲಿ ಶಿಕ್ಷಕರ ವೃತ್ತಿ ಪವಿತ್ರವಾದದ್ದು, ಶಿಕ್ಷಕರು ನಿರಂತರ ಅಧ್ಯಯನಶೀಲರಾಗಬೇಕು. ಶಿಕ್ಷಕರು ಉರಿಯುತ್ತಿರುವ ದೀಪದ ಹಾಗೆ, ದೀಪಕ್ಕೆ ತೈಲದ ಅವಶ್ಯಕತೆ ಇರುವಂತೆ ಶಿಕ್ಷಕರಿಗೆ ನಿರಂತರ ಅಧ್ಯಯನ, ಕಲಿಕೆ ಇರಬೇಕು. ನಿರಂತರ ಕಲಿಕೆ ಬೋಧನೆಯನ್ನು ಉತ್ತಮವಾಗಿಸುತ್ತದೆ. ದೇಶ ಕಟ್ಟುವ, ನಿರ್ಮಾಣ ಮಾಡುವ ಕಾರ್ಯ ಶಿಕ್ಷಕರ ಕೈಯಲ್ಲಿದೆ. ಉಸಿರು, ಬದುಕು ಇರುವ ತನಕ ಕಲಿಕೆ ನಿರಂತರವಾಗಿರಬೇಕು. ಶಿಕ್ಷಕ ವಿದ್ಯಾರ್ಥಿಯಾಗಿರಬೇಕು. ಬೋಧನಾ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಬೇಕು ಎಂದು ಕರೆ ನೀಡಿದರು.

ಮೊದಲ ಅಧಿವೇಶನದಲ್ಲಿ ಶ್ರೀಮತಿ ಸುನೀತಾ ಫಡ್ನವೀಸ್ ರವರು ಕನಸನ್ನು ನನಸಾಗಿಸುವುದು, ನಮ್ಮ ಗುರಿಗಳು, ತರಗತಿಯಲ್ಲಿ ನಮ್ಮ ಶಿಕ್ಷಣ ಹೇಗೆ ಇರಬೇಕು ಮತ್ತು ಮಕ್ಕಳ ಕಲಿಕೆ ಬಗ್ಗೆ ಉಪನ್ಯಾಸ ನೀಡಿದರು.

ಎರಡನೇ ಅಧಿವೇಶನದಲ್ಲಿ ಶ್ರೀ ವಿವೇಕಾನಂದರು 'ಸೃಜನಾತ್ಮಕ ಕಲಿಕೆ' ಬಗ್ಗೆ ಉಪನ್ಯಾಸ ನೀಡಿದರು.

ಮಧ್ಯಾಹ್ನದ ಅಧಿವೇಶನದಲ್ಲಿ ಖ್ಯಾತ ಅಂತರ ರಾಷ್ಟ್ರೀಯ ಶಿಕ್ಷಣ ತಜ್ಞರಾದ ಡಾ॥ ಗುರುರಾಜ ಕರಜಗಿ ರವರು 'ಬೋಧನೆಯಲ್ಲಿ ನೈತಿಕತೆ ಮತ್ತು ಮೌಲ್ಯ' ಎಂಬ ವಿಷಯದ ಬಗ್ಗೆ ಉತ್ತಮವಾದ ಮತ್ತು ಉಪಯುಕ್ತವಾದ




ಉಪನ್ಯಾಸವನ್ನು ನೀಡುತ್ತಾ ಈ ಸಂದರ್ಭದಲ್ಲಿ ಒಬ್ಬ ಸೂಫಿ ಸಂತ ಸರಮಾಸ್ತನ ಕಥೆಯನ್ನು ಹೇಳಿದರು.

ಸರಮಾಸ್ತ ವೃತ್ತಿಯಲ್ಲಿ ಶಿಕ್ಷಕ. ಮಕ್ಕಳಿಗೆಲ್ಲ ಬಹಳ ಪ್ರಿಯನಾಗಿದ್ದ. ಒಂದು ದಿನ ತರಗತಿಯಲ್ಲಿ ಪಾಠ ಮಾಡುತ್ತಿದ್ದಾಗ, ಮಕ್ಕಳೆಲ್ಲ ಕತ್ತು ತಿರುಗಿಸಿ ಕಿಟಕಿಯಿಂದ ಹೊರಗೆ ನೋಡುತ್ತಿರುವುದು ಗೊತ್ತಾಯಿತು. "ಮಕ್ಕಳೇ ಈ ಕಡೆಗೆ ನೋಡಿ" ಎಂದು ಕೂಗಿದ. ಮಕ್ಕಳು ಈ ಕಡೆಗೆ ಲಕ್ಷ್ಯ ನೀಡಿದರು. ಮತ್ತೊಂದು ಕ್ಷಣಕ್ಕೆ ಅವರ ಮನಸ್ಸೆಲ್ಲಾ ಕಿಟಕಿಯ ಹೊರಗೇ. ಮತ್ತೆ ಇವನ ಕೂಗು. ಹೀಗೆಯೇ ಮೂರು, ನಾಲ್ಕು ಬಾರಿಯಾದಾಗ ಅವನಿಗೂ ಕುತೂಹಲ. ಹೊರಗೆ ಏನು ನಡೆಯುತ್ತಿದೆ ನೋಡೋಣ ಎಂದು ಬಾಗಿಲು ತೆರೆದು ಹೊರಬಂದ. ಅಲ್ಲೊಂದು ಸುಂದರ ಸನ್ನಿವೇಶ. ಒಬ್ಬ ರೈತ ಒಂದು ಬಲಶಾಲಿಯಾದ ಹೋರಿಯನ್ನು ಹಗ್ಗಕಟ್ಟಿ ಎಳೆಯುತ್ತಿದ್ದಾನೆ. ಹೋರಿಗೆ ಹೋಗಲು ಮನಸ್ಸಿಲ್ಲ. ಅದು ಆತನನ್ನು ಎಳೆಯುತ್ತಿದೆ. ಒಂದು ತರಹದ ಹಗ್ಗದ ಎಳೆದಾಟ ನಡೆಯುತ್ತಿದೆ. ಇದನ್ನು ಮಕ್ಕಳು ಹೇಗೆ ತಪ್ಪಿಸಿಕೊಂಡಾರು? ಸರಮಾಸ್ತ ಎಲ್ಲ ಮಕ್ಕಳನ್ನು ಹೊರಗೆ ಕರೆದು ಈ ತಮಾಷೆ ನೋಡಲು ಹೇಳಿದರು. ತಾನು ಹೋಗಿ ರೈತನನ್ನು ಕೇಳಿದರು. "ಯಾರಪ್ಪಾ ನೀನು, ಅದನ್ನು ಹೀಗೆ ಏಕೆ ಎಳೆಯುತ್ತೀಯಾ?" "ಸ್ವಾಮೀ, ಇದು ನನ್ನ ಹೋರಿ, ಮನೆಗೆ ಬರುವುದಕ್ಕೆ ಹಟ ಮಾಡುತ್ತಿದೆ" ಎಂದ ರೈತ. ಸರಮಾಸ್ತ "ಒಂದು ನಿಮಿಷ ಇರು" ಎಂದು ಹೇಳಿ ರಸ್ತೆಯ ಬದಿಗೆ ಸೊಂಪಾಗಿ ಬೆಳೆದಿದ್ದ ಹಸಿರು ಹುಲ್ಲನ್ನು ಹಿಡಿಯಷ್ಟು







ಕಿತ್ತು ರೈತನ ಕೈಗೆ ಕೊಟ್ಟು ಹೇಳಿದರು. "ಇದನ್ನು ಹೋರಿಗೆ ತೋರಿಸು, ಕೊಡಬೇಡ. ತೋರಿಸುತ್ತಲೇ ಮನೆಗೆ ಕರೆದುಕೊಂಡು ಹೋಗು." ಹಸಿರು ಹುಲ್ಲು ಕಾಣುತ್ತಲೇ ಹೋರಿ ಅವನನ್ನು ಹಿಂಬಾಲಿಸಿ ಹೊರಟಿತು. ಸರಮಾಸ್ತ ಮತ್ತೆ ಮಕ್ಕಳನ್ನು ತರಗತಿಗೆ ಕರೆದುಕೊಂಡು ಹೋಗಿ ಪಾಠ ಪ್ರಾರಂಭಿಸಿದರು.

ಶಾಲೆಯ ಮುಖ್ಯೋಪಾಧ್ಯಾಯರು ಸರಮಾಸ್ತರನ್ನು ತರಾಟೆಗೆ ತೆಗೆದುಕೊಂಡರು. "ಏನು? ನೀನು ತರಗತಿ ಬಿಟ್ಟು ಮಕ್ಕಳಿಗೆ ತಮಾಷೆ ತೋರಿಸುತ್ತೀಯಂತೆ?". ಆಗ ಸರಮಾಸ್ತ ಹೇಳಿದರು "ಸ್ವಾಮೀ, ಹೊರಗೆ ರಸ್ತೆಯ ಮೇಲೆ ಏನು ಆಗುತ್ತಿತ್ತೋ ಅದು ತರಗತಿಯ ಒಳಗೂ ಆಗುತ್ತಿತ್ತು. ಹೊರಗಿನ ದೃಶ್ಯ ಮಕ್ಕಳನ್ನು ಆ ಕಡೆಗೆ ಎಳೆದರೆ ನಾನು ಇತ್ತ ಎಳೆಯುತ್ತಿದ್ದೆ. ಅದಕ್ಕೆ ಒಂದೇ ಪರಿಹಾರ. ಮಕ್ಕಳ ಮನಸ್ಸನ್ನು ಮೊದಲು ಆಕರ್ಷಿಸೋಣ. ನಂತರ ಪಾಠ ಮಾಡೋಣ. ಆಗ ಈ ಹಗ್ಗದ ಎಳೆದಾಟದ ಪರಿಪಾಟಲು ಇರುವುದಿಲ್ಲ." ಇದು ಸೃಜನಶೀಲ ಶಿಕ್ಷಕ ಪಾಠ ಮಾಡುವ ವಿಧಾನ.

ಕಾರ್ಯಕ್ರಮದಲ್ಲಿ ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯ ನಿರ್ದೇಶಕರಾದ ಡಾ. ಎಂ.ಎನ್. ಚನ್ನಬಸಪ್ಪನವರು ಕಾರ್ಯದರ್ಶಿಗಳಾದ ಶ್ರೀ ಟಿ.ಕೆ. ನಂಜುಂಡಪ್ಪನವರು, ವಿದ್ಯಾಧಿಕಾರಿಗಳಾದ ಶ್ರೀ ಸಿ.ಎಸ್. ಸಿದ್ಧಲಿಂಗಯ್ಯನವರು, ನೋಡಲ್ ಅಧಿಕಾರಿಯಾದ ಶ್ರೀ ಈಶ್ವರಯ್ಯನವರು ವ್ಯವಸ್ಥಾಪಕರಾದ ಶ್ರೀ ಎಲ್. ಬಸವರಾಜು ಅವರು, ಆಡಳಿತಾಧಿಕಾರಿಗಳಾದ ಶ್ರೀ ವಿಶ್ವನಾಥಯ್ಯ ಅವರು, ಶ್ರೀ ಬಿ. ಗಂಗಾಧರಯ್ಯ, ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಪ್ರಾಂಶುಪಾಲರಾದ ಶ್ರೀ ಶಿವಕುಮಾರಯ್ಯ ಮೊದಲಾದ ಗಣ್ಯರು ಉಪಸ್ಥಿತರಿದ್ದರು. ಸುಮಾರು ೬೫೦ ಶಿಕ್ಷಕರು ಕಾರ್ಯಾಗಾರದ ಉಪಯೋಗ ಪಡೆದರು.

ಸ್ವಾಗತವನ್ನು ಉಪ-ಪ್ರಾಂಶುಪಾಲರಾದ ಶ್ರೀ ಉಮಾಮಹೇಶ್ ರವರು ಮಾಡಿದರು. ಮುಖ್ಯಸ್ಥರಾದ ಶ್ರೀ ಎನ್. ಬಸವರಾಜಯ್ಯ ಅವರು ವಂದನಾರ್ಪಣೆಯನ್ನು, ಸಹ ಶಿಕ್ಷಕರಾದ ಶ್ರೀ ನಂದೀಶ್ ನಿರೂಪಣೆ ಮಾಡಿದರು. ಶ್ರೀ ಮಠದ ಮುಖ್ಯ ಶಿಕ್ಷಕರುಗಳಾದ ಶ್ರೀ ಎಸ್. ಮಹದೇವಯ್ಯ, ಶ್ರೀ ರೇಣುಕಾರಾಧ್ಯ, ಗಂಗಾಧರಯ್ಯ ಅವರು ಸಹಕರಿಸಿದರು. ■

ವರದಿ: ರಾಜಶೇಖರಯ್ಯ, ಮುಖ್ಯ ಶಿಕ್ಷಕರು,
ಸಿದ್ಧಗಂಗಾ ಪ್ರೌಢಶಾಲೆ, ಶಿವನಹಳ್ಳಿ, ಬೆಂಗಳೂರು

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ **'ಸಿದ್ಧಗಂಗಾ'** ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿ ಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿ ರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು **ಸಿದ್ಧಗಂಗಾ ಮಾಸಪತ್ರಿಕೆ** ಹೆಸರಿನಲ್ಲಿ **ನಗದು/ಚೆಕ್/ಡಿ.ಡಿ.** ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (ಐಒ) ಸಂಖ್ಯೆ ನಮೂದಿಸಿ ದೂರವಾಣಿ/ ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ **'ಸಿದ್ಧಗಂಗಾ'** ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ. ವಾರ್ಷಿಕ ಚಂದಾದಾರರು ತಮ್ಮ ಸದಸ್ಯತ್ವವನ್ನು ನವೀಕರಿಸಿಕೊಳ್ಳಬೇಕೆಂದು ಕೋರಲಾಗಿದೆ.

**ಪ್ರಕಾಶಕರು,**
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪.
ದೂರವಾಣಿ : ೦೮೧೬-೨೨೮೨೫೨೨







## ದಾನಿಗಳ ಪಟ್ಟಿ

ಶ್ರೀ ಸಿದ್ಧಗಂಗಾ ಮಠ, ತುಮಕೂರು

ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೧೯೭೪. | ತುಮಕೂರು ಕೈಗಾರಿಕಾ ಸಹಕಾರ ಸಂಘ ತುಮಕೂರು | ೧೦,೦೦೦.೦೦ |
| ೧೯೭೫. | ಶ್ರೀ ವೈ.ಎಂ. ವಿರೂಪಾಕ್ಷಯ್ಯ ಹಾವೇರಿ | ೨,೦೦೦.೦೦ |
| ೧೯೭೬. | ಶ್ರೀ ಸಿ.ಎಸ್. ರಾಜಶೇಖರಯ್ಯ ಬೆಂಗಳೂರು | ೨,೦೦೧.೦೦ |
| ೧೯೭೭. | ಶ್ರೀ ಕೆ.ಎಸ್. ಲಿಂಗದೇವರು ಬೆಂಗಳೂರು | ೨,೦೦೦.೦೦ |
| ೧೯೭೮. | ಶ್ರೀ ಬಿ.ಎಂ. ಪರಮೇಶ್ವರಪ್ಪ ಬೆಂಗಳೂರು | ೫,೦೦೦.೦೦ |
| ೧೯೭೯. | ಶ್ರೀ ಎಂ. ನಂಜುಂಡಪ್ಪ ಕುರುಡಿ | ೧,೫೦೧.೦೦ |
| ೧೯೮೦. | ಶ್ರೀ ಹುಚ್ಚೇಗೌಡ ಬೆಂಗಳೂರು | ೨,೦೦೦.೦೦ |
| ೧೯೮೧. | ಶ್ರೀ ಕೆ.ಎಸ್. ಮಹದೇವಪ್ಪ ಕುರುಬೂರು | ೨,೦೦೦.೦೦ |
| ೧೯೮೨. | ಶ್ರೀ ಐ.ಎಸ್. ಸಿದ್ಧರಾಮಣ್ಣ ಹೊಸೂರು | ೧,೧೧೧.೦೦ |
| ೧೯೮೩. | ಡಾ. ಬಿ. ಭಾಸ್ಕರ ಬೆಂಗಳೂರು | ೧೦,೦೦೦.೦೦ |
| ೧೯೮೪. | ಶ್ರೀ ಎಸ್.ಎಂ. ನಾಗರಾಜಪ್ಪ ಬೆಂಗಳೂರು | ೩೬,೫೦೦.೦೦ |
| ೧೯೮೫. | ಶ್ರೀ ಟಿ.ಎಸ್. ಗುನ್‌ಮಾಹಿ ಮತ್ತು ಶ್ರೀಮತಿ ಸುಕನ್ಯ ಬೆಂಗಳೂರು | ೫,೦೦೧.೦೦ |
| ೧೯೮೬. | ಡಾ. ಜಿ. ವೀರಪ್ಪದೇವರು ಎಸ್.ಐ.ಟಿ. ತುಮಕೂರು | ೫೦,೦೦೦.೦೦ |
| ೧೯೮೭. | ಶ್ರೀ ಅರ್ಜುನ ಬೆಂಗಳೂರು | ೫,೦೦೦.೦೦ |
| ೧೯೮೮. | ಶ್ರೀ ಕಿರಣ್ ಮಂಜುನಾಥ ದೇವನಹಳ್ಳಿ | ೫೦೦.೦೦ |
| ೧೯೮೯. | ಶ್ರೀ ಐಗೂರು ಸುಬ್ಬೇಗೌಡ ಮೃತ್ಯುಂಜಯ ಬೆಂಗಳೂರು | ೧೦,೦೦೦.೦೦ |
| ೧೯೯೦. | ಶ್ರೀಮತಿ ನೇತ್ರಾವತಿ ಕೊಡಿಗೇಹಳ್ಳಿ | ೧,೦೦೦.೦೦ |
| ೧೯೯೧. | ಶ್ರೀ ಕರಿಸಿದ್ಧಯ್ಯ ತಿಪಟೂರು | ೧,೦೦೦.೦೦ |

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೧೯೯೨. | ಶ್ರೀ ಕೀರ್ತಿಪ್ರಸಾದ್ ಬೆಂಗಳೂರು | ೨೦,೦೦೦.೦೦ |
| ೧೯೯೩. | ಶ್ರೀ ಎಸ್.ಸಿ. ಕೆಂಪಯ್ಯ ಬೆಂಗಳೂರು | ೧೦,೨೦೧.೦೦ |
| ೧೯೯೪. | ಶ್ರೀ ಚಂದ್ರಶೇಖರಯ್ಯ ಬೆಂಗಳೂರು | ೧,೦೦೦.೦೦ |
| ೧೯೯೫. | ಶ್ರೀ ಆರ್. ಆಂಜಿನಪ್ಪ ಕಾಡಅಲಪನಹಳ್ಳಿ | ೧,೦೦೦.೦೦ |
| ೧೯೯೬. | ಶ್ರೀ ಕುಟೀಸ್ ಆಕಾಡೆಮಿ ಆಫ್ ಕುಟಾನಿಯಸ್ ಸೈನ್ಸ್ ಬೆಂಗಳೂರು | ೨೫,೦೦೧.೦೦ |
| ೧೯೯೭. | ಶ್ರೀ ಟಿ. ಗಿರಿಗೌಡ ಮಾರೋವಳ್ಳಿ | ೧,೦೦೦.೦೦ |
| ೧೯೯೮. | ಶ್ರೀ ಕೆ.ಎನ್. ವೀರಣ್ಣ ಬೆಂಗಳೂರು | ೧೦,೦೦೦.೦೦ |
| ೧೯೯೯. | ಶ್ರೀ ಟಿ. ಗಂಗಾಧರಯ್ಯ ತುಮಕೂರು | ೬೦,೦೦೦.೦೦ |
| ೨೦೦೦. | ಶ್ರೀ ಪಿ.ಎಲ್. ಸೋಮಶೇಖರಯ್ಯ ಬೆಂಗಳೂರು | ೯೦,೦೦೦.೦೦ |
| ೨೦೦೧. | ಶ್ರೀ ಬಸವರಾಜಯ್ಯ ಮಲ್ಲಯ್ಯ ಹಿರೇಮಠ ಬೆಂಗಳೂರು | ೫,೦೦೦.೦೦ |
| ೨೦೦೨. | ಶ್ರೀ ಬಿ.ಎಲ್. ಗಂಗಾಧರ್ ಬೆಂಗಳೂರು | ೨,೦೦೦.೦೦ |
| ೨೦೦೩. | ಶ್ರೀ ಟಿ. ಚಂದ್ರಶೇಖರಯ್ಯ ತುಮಕೂರು | ೨,೦೦೦.೦೦ |
| ೨೦೦೪. | ಶ್ರೀ ಹೆಚ್.ಆರ್. ಪ್ರಸಾದ್ ಹುಲಸಲಿಗೆ | ೧,೧೧೦.೦೦ |
| ೨೦೦೫. | ಶ್ರೀ ಸಿ.ಎಸ್. ವಿನಯಕುಮಾರ ಬೆಂಗಳೂರು | ೨೫,೦೦೧.೦೦ |
| ೨೦೦೬. | ಶ್ರೀಮತಿ ಲಲಿತಮ್ಮ ಶಿವಲಿಂಗಯ್ಯ ತುಮಕೂರು | ೫,೦೦೫.೦೦ |
| ೨೦೦೭. | ಶ್ರೀ ಪುಟ್ಟಲಿಂಗಯ್ಯ ತುಮಕೂರು | ೧,೦೦೦.೦೦ |
| ೨೦೦೮. | ಶ್ರೀಮತಿ ತೇಜೇಶ್ವರಿ ಬಿ.ಎಸ್. ಬೆಂಗಳೂರು | ೧೫,೦೦೦.೦೦ |

(ಮುಂದುವರೆಯುತ್ತದೆ)

RNI No. 17139/69
"Siddaganga" Monthly - Postal Reg. No. L2/RNP/385/TMR/2018-20
Posted at RMS, Tumkur-572 102







LM.05657.
Sri Vijayananda Basanagu,
V.R. Builders,
No.805, 13th Cross,
M.E.S. Road,
Muthyalanagara,
BANGALORE-560 054.

If undelivered please return to :
Editor
Siddaganga Monthly Magazine
Siddaganga Math
Tumkur-572 104